# ಕೆಮ್ಮು ನಿದ್ರಿಸುವಂತೆ ಮಾಡುತ್ತದೆ ಗ್ಲೈಕೋಡಿನ್




**ಎಚ್ಚರಗೊಳ್ಳಿರಿ ಹೊಸ ಆರಾಮದೊಂದಿಗೆ.**

everest/83/ACW/307-kn

# ಚಂದಮಾಮ

ಸಂಸ್ಥಾಪಕರು : 'ಚಕ್ರಪಾಣಿ'
ಸಂಚಾಲಕರು : ನಾಗಿರೆಡ್ಡಿ

ಈ ಸಂಚಿಕೆ "ಚಂದಮಾಮ"ನ ಮೂವತ್ತಾರನೇ ವರ್ಷದ ಎರಡನೇ ಹಜ್ಜೆ. ಬಹಳ ಕಾಲದಿಂದ ಪಾಠಕರು ಕಾಲ್ಪನಿಕ ಬೇತಾಳ ಕಥೆಗಳನ್ನು ಓದುತ್ತಾ ಬಂದಿದ್ದೀರಿ. ಬೇತಾಳ ಹೇಳಿದ ಅಸಲು ಕಥೆ ಹೇಗಿರುವುದೆಂದು ಹೊಸ ಪಾಠಕರು ಕುತೂಹಲ ತೋರಿಸಿದ್ದಾರೆ. ಅಂತಹರಿಗಾಗಿ "ಕಳ್ಳನ ಪುಣ್ಯ" ಎಂಬ ಹಳೆಯ ಬೇತಾಳ ಕಥೆಯನ್ನೂ, ಆರಿಸಿದ ಮತ್ತೆ ಕೆಲವು ಒಳ್ಳೆಯ ಹಳೆಯ ಕಥೆಗಳನ್ನೂ ಈ ಸಂಚಿಕೆಯಲ್ಲಿ ತಿರುಗಿ ಪ್ರಕಟಿಸಿದ್ದೇವೆ.

## ಅಮರವಾಣಿ

ಆಲಾನೇ ಗೃಹ್ಯತೇ ಹಸ್ತೀ ವಾಜೀ ವಲ್ಗಾಸು ಗೃಹ್ಯತೇ
ಸದ್ವಾಕ್ಯೈ ಗೃಹ್ಯತೇ ವಿದ್ವಾನ್ ದುಷ್ಟೋ ವಿತ್ತೇಷು ಗೃಹ್ಯತೇ

ಗೂಟಕ್ಕೆ ಕಟ್ಟಿ ಆನೆಯನ್ನೂ, ಕಡಿವಾಣದಿಂದ ಕುದುರೆಯನ್ನೂ, ಒಳ್ಳೆಯ ಮಾತುಗಳಿಂದ ವಿದ್ವಾಂಸನನ್ನೂ, ಹಣದಿಂದ ದುಷ್ಟನನ್ನೂ ವಶಪಡಿಸಿಕೊಳ್ಳಬಹುದು.

ಸಂಪುಟ: ೭೧ ಆಗಸ್ಟ್ '೮೩ ಸಂಚಿಕೆ: ೨

ಬಿಡಿ ಪ್ರತಿ ರೂ. ೨-೦೦ :: ವಾರ್ಷಿಕ ಚಂದಾ ರೂ. ೨೪-೦೦



## ಚಂದಮಾಮನ ಹರಟೆ



### ಅಗಾಧವಾದ ಜಲನಿಧಿಯಲ್ಲಿ

೧೬೨೨ ರಲ್ಲಿ ಅಮೆರಿಕಾದ ಫ್ಲೋರಿಡಾ ಜಲಸಂಧಿಯಲ್ಲಿ ಕೆರಳಿ ಎದ್ದ ತುಫಾನು ಶಾಂಟಾ ಮಾರ್ಗರಿಟಾ, ಆಟೋಶಾ ಎಂಬ ಎರಡು ಸ್ಪಾನಿಷ್ ಹಡಗುಗಳನ್ನು ತಲೆ ಕೆಳಗೆ ಮಾಡಿತು. ಮುನ್ನೂರ ಎಂಬತ್ತು ಮಂದಿ ನಾವಿಕರೊಂದಿಗೆ ಸುಮಾರು ಆರು ನೂರು ಕೋಟಿ ಡಾಲರ್ ಬೆಲೆಯ ಬಂಗಾರವು ಸಮುದ್ರದಲ್ಲಿ ಮುಳುಗಿತು. ಅನಂತರ ಕೆಲವು ದಿನಗಳಲ್ಲಿ ಮೆಲ್‌ಫಿಷರ್ ಎಂಬ ಪ್ರಮುಖ ನಿಧಿ ಅನ್ವೇಷಕನು ಸಮುದ್ರ ಗರ್ಭದಿಂದ ಅದರಲ್ಲಿ ಹತ್ತನೇ ಒಂದು ಭಾಗ ಬಂಗಾರವನ್ನು ಮೇಲೆ ತರಲು ಸಾಧ್ಯವಾಯಿತು.

### ಮರುಭೂಮಿಯಲ್ಲಿ ತಿಮಿಂಗಿಲಗಳು

ಭೂಗರ್ಭ ಶಾಸ್ತ್ರಜ್ಞನಾದ ಜಿಯೋಫ್ರೇ ಫ್ರಾಂಕ್ಸ್ ಎಣ್ಣೆಗಳ ನೆಲೆಯನ್ನು ಸಹಾರಾ ಮರುಭೂಮಿಯಲ್ಲಿ ಅನ್ವೇಷಿಸುತ್ತಿದ್ದಾಗ ತಿಮಿಂಗಿಲಗಳ ಅವಶೇಷಗಳು ಹೊರಬಿದ್ದುವು. ಸುಮಾರು ನಾಲ್ಕು ಕೋಟಿ ವರ್ಷಗಳ ಹಿಂದೆ ಜೀವಿಸಿದ ತಿಮಿಂಗಿಲಗಳ ಅವಶೇಷಗಳಷ್ಟೇ ಅಲ್ಲದೆ, ಶಿಲೆಗಳಾಗಿ ಮಾರ್ಪಟ್ಟ ಸುರಾಮೀನು ಮತ್ತು ಮೊಸಳೆಗಳ ಎಲುವುಗಳು ಕೂಡಾ ಬಯಲಾದುದರಿಂದ ಆಫ್ರಿಕಾದಲ್ಲಿರುವ ಸಹಾರಾ ಮರುಭೂಮಿ ಒಂದು ಕಾಲದಲ್ಲಿ ಸಮುದ್ರ ಭಾಗವಾಗಿತ್ತೆಂದು ತಿಳಿಯುತ್ತದೆ.



## ನಿಮಗೆ ಗೊತ್ತೇ?

೧. ಗೋವೆಗೆ ಪೂರ್ವದಲ್ಲಿ ಯಾವ ಹೆಸರಿತ್ತು ?

೨. ಆಗ್ರಾ ನಗರಕ್ಕೆ ಆ ಹೆಸರು ಹೇಗೆ ಬಂತು ?

೩. ಡಾರ್ಜಿಲಿಂಗ್ ನಗರಕ್ಕೆ ಆ ಹೆಸರು ಏಕೆ ಬಂದಿತು ?

೪. ಕಾಶಿ ಒಂದೇ ನಗರವಾದರೂ, ಆ ನಗರಕ್ಕೆ ವಾರಣಾಸಿ ಎಂಬ ಎರಡನೇ ಹೆಸರು ಬರಲು ಕಾರಣವೇನು ?

೫. ಏಷ್ಯಾ ಖಂಡದಲ್ಲಿ ಎಲ್ಲಕ್ಕಿಂತ ದೊಡ್ಡದಾದ ಗುಲಾಬೀ ತೋಟ ಎಲ್ಲಿದೆ ?

೬. ಪ್ರಪಂಚದಲ್ಲಿ ಎಲ್ಲಕ್ಕಿಂತ ಹೆಚ್ಚು ಎತ್ತರ ಪ್ರದೇಶದಲ್ಲಿರುವ ರೈಲ್ವೆ ಸ್ಟೇಶನ್ನಿನ ಹೆಸರೇನು ?

೭. ಪ್ರಪಂಚದೊಳಗೆಲ್ಲಾ ದೊಡ್ಡದಾದ ಪೂರ್ತಿ ಹಾಲುಗಲ್ಲಿನಿಂದ ಕಟ್ಟಲ್ಪಟ್ಟ ಮಸೀದಿ ಎಲ್ಲಿದೆ?

(ಉತ್ತರಗಳು ೬೪ ನೇ ಪುಟದಲ್ಲಿ)



# ಅಮೂಲ್ಯವಾದ ಆಸ್ತಿ

**ಪೂ**ರ್ವ ಕಾಲದಲ್ಲಿ ವಿಕ್ರಮಸೇನನೆಂಬ ಮಹಾರಾಜನು ಅಮರಾವತೀ ನಗರವನ್ನು ಪಾಲಿಸಿಕೊಂಡಿದ್ದನು. ಅವನಿಗೆ ತನ್ನ ಸುತ್ತಲೂ ಇರುವ ಅಧಿಕಾರಿಗಳ ಮೇಲೆಯೂ, ಉದ್ಯೋಗಸ್ಥರ ಮೇಲೆಯೂ ಪ್ರೀತಿಯೂ ಆದರವೂ ಇರಲಿಲ್ಲ. ರಾಜಕಾರ್ಯ ನಡೆಸಲು ಅವರೆಲ್ಲ ಬೇಕು ಎಂಬಷ್ಟರ ಮಟ್ಟಿಗೆ ನೋಡಿಕೊಳ್ಳುತ್ತಿದ್ದನು. ಕಾರಣವೇನೆಂದರೆ, ಅವರೆಲ್ಲ ಯಾವಾಗಲೂ ರಾಜನ ಮುಖಸ್ತುತಿ ಮಾಡಿಕೊಂಡೇ ಇರುವವರು. ಈ ಬಗೆಯ ಧೋರಣೆ ಆ ರಾಜನ ಮನಸ್ಸಿಗೆ ಸ್ವಲ್ಪವೂ ಹಿಡಿಸುತ್ತಿರಲಿಲ್ಲ.

ಆದುದರಿಂದ ವಿಕ್ರಮಸೇನನು ಆಗಾಗ ವೇಷ ಬದಲಾವಣೆ ಮಾಡಿಕೊಂಡು ಸಾಧಾರಣ ಪ್ರಜೆಯ ಹಾಗೆ, ಊರೂರುಗಳಲ್ಲಿ ತಿರುಗುತ್ತ ಸಾಮಾನ್ಯ ಪ್ರಜೆಗಳು ಹೇಗೆ ಜೀವಿಸುವರೆಂಬುದನ್ನು ಸ್ವತಃ ತಿಳಿದುಕೊಳ್ಳುವನು. ಅವನಿಗೆ ತಾನು ಅರಮನೆಯಲ್ಲಿ ಮಾಡುವ ರಾಜಭೋಜನಕ್ಕಿಂತಲೂ ಸಾಮಾನ್ಯ ಜನರ ಊಟವೇ ಚೆನ್ನಾಗಿರುವಂತೆ ಕಾಣುತ್ತಿತ್ತು.

ಒಂದು ದಿನ ವಿಕ್ರಮಸೇನ ರಾಜನು ಮಾರುವೇಷದಲ್ಲಿ ಒಂದು ಕಾಡು ದಾರಿಯ ಮೂಲಕ ಹೋಗುತ್ತಿರಲು, ವೇಣುವಿನಿಂದ ಹೊರಡುವ ಇನಿದಾದ ಹಾಡಿನ ಗೀತೆ ಕೇಳತೊಡಗಿದನು. ರಾಜನು ಆ ನಾದವು ಬರುವ ಕಡೆಗೇ ಹೋಗಿ ಒಬ್ಬ ಕುರುಬ ಹುಡುಗನನ್ನು ನೋಡಿದನು. ಅವನು ಆಗ ತಾನೇ ತಾರುಣ್ಯಕ್ಕೆ ಕಾಲಿಡುವ ಹದಿನಾರು ವರ್ಷ ಪ್ರಾಯದವನು. ಬಡತನದ ಚಿಹ್ನೆಯಾಗಿ ಚಿಂದಿಬಟ್ಟೆಗಳನ್ನು ಧರಿಸಿದ್ದರೂ ಸುಂದರ ತರುಣನಾಗಿದ್ದನು. ಕೊಳೆ ಹಿಡಿದ ಬಂಗಾರದಂತಿರುವ ಅವನ ಲಕ್ಷಣಗಳನ್ನು ನೋಡಿ, ರಾಜನು ಆಶ್ಚರ್ಯಪಟ್ಟನು. ಒಂದು ವೇಳೆ ತನ್ನ ಹಾಗೆಯೇ ಅವನೂ ಕೂಡಾ ಮಾರುವೇಷದಲ್ಲಿರುವ ಯಾವ ರಾಜಕುಮಾರನೇನೋ ಎಂದುಕೊಂಡನು. ಆ ಹುಡುಗನನ್ನು ಮಾತಾಡಿಸಿದಾಗ, ಅವನ ತಂದೆ ತಾಯಿಗಳು ಬಹಳ ಬಡವರೆಂದು ತಿಳಿಯಿತು. ಅವನು ಕುರಿಮಂದೆಯನ್ನು ಹೊಡೆದುಕೊಂಡು ಆ ಪ್ರಾಂತಕ್ಕೆ ಬಂದಿದ್ದನು.

ಆ ಕುರುಬ ಹುಡುಗನ ಹೆಸರು ಸಾಂಬ. ಅವನು ರಾಜನ ಪ್ರಶ್ನೆಗಳಿಗೆ ಸ್ಪಷ್ಟವಾಗಿಯೇ ಉತ್ತರ ಕೊಟ್ಟನು. ಹೇಳುವ ರೀತಿಯಿಂದ ಮರೆ ಮೋಸಗಳಾವುದೂ ಅವನಿಗೆ ತಿಳಿಯದೆಂದು ಸ್ಪಷ್ಟವಾಯಿತು.

ಎಸ್. ಸುಂದರರಾವ್



ರಾಜನು ಅವನ ಬಳಿಗೆ ಹೋಗಿ ಪ್ರೀತಿಯಿಂದ "ಸಾಂಬಾ, ನನ್ನೊಂದಿಗೆ ಬರುವಿಯಾ? ನಿನಗೆ ಒಳ್ಳೆಯ ಬಟ್ಟೆಬರೆ, ಊಟ ತಿಂಡಿ, ಉದ್ಯೋಗವನ್ನೆಲ್ಲಾ ಏರ್ಪಡಿಸುತ್ತೇನೆ" ಎಂದನು.

"ತಂದೆ ತಾಯಿಗಳು ಒಪ್ಪಿದರೆ ಹಾಗೆಯೇ ಬರುತ್ತೇನೆ" ಎಂದನು ಸಾಂಬ.

ಅವನ ತಾಯಿ ತಂದೆಯರ ಒಪ್ಪಿಗೆಯೂ ದೊರೆಯಿತು. ಸಾಂಬನು ರಾಜನೊಂದಿಗೆ ಅಮರಾವತೀ ನಗರವನ್ನು ಸೇರಿದ ಮೇಲೆ, ತನ್ನನ್ನು ಕರೆದುಕೊಂಡು ಬಂದವನು ಮಹಾರಾಜನೇ ಎಂದು ಸಾಂಬನಿಗೆ ಗೊತ್ತಾಯಿತು. ರಾಜನಿಗೆ ತನ್ನ ಮೇಲೆ ಇಷ್ಟೊಂದು ಅನುಗ್ರಹವಾದುದನ್ನು ನೆನೆದು ಅವನಿಗೆ ಬಹಳ ಸಂತೋಷವೆನಿಸಿತು.

ಸಾಂಬನ ಕುರುಬ ವೇಷವನ್ನು ತೆಗೆದುಹಾಕಲಾಯಿತು. ರಾಜಕೀಯವಾದ ದುಸ್ತುಗಳನ್ನೂ, ರತ್ನಖಚಿತ ಶಿರೋಭೂಷಣವನ್ನೂ ಅವನಿಗೆ ಕೊಟ್ಟರು. ಓದು ಬರಹ ಕಲಿಸಲು ಗುರುವನ್ನು ಏರ್ಪಡಿಸಲಾಯಿತು. ಸಭೆಯಲ್ಲಿ ಹೇಗೆ ಹೇಗೆ ನಡೆದುಕೊಳ್ಳಬೇಕೆಂಬುದನ್ನು ಪ್ರತ್ಯೇಕವಾಗಿ ಕಲಿಸಿಕೊಟ್ಟರು. ಹೀಗೆ ಎರಡು ವರ್ಷಗಳಲ್ಲಿ ಸಾಂಬನು ಅಲ್ಲಿಗೆ ಹೊಂದುವಂತೆ ಗಟ್ಟಿಗನಾದನು. ಮಹಾರಾಜನು ಅವನನ್ನು ಕೋಶಾಧಿಕಾರಿಯನ್ನಾಗಿ ನಿಯಮಿಸಿ, ಖಜಾನೆಯ ಬೀಗದ ಕೈಯನ್ನು ಅವನಿಗೆ ಕೊಡಿಸಿದನು. ಅನೇಕ ಕೋಟಿ ಬೆಲೆಬಾಳುವಂತಹ ಖಜಾನೆಗೆ ಸಾಂಬನಿಗಿಂತ ಹೆಚ್ಚಿನ ನಂಬಿಗಸ್ಥರು ಬೇರೆ ಯಾರೂ ಇಲ್ಲವೆಂದೂ ರಾಜನಿಗೆ ಗಟ್ಟಿ ವಿಶ್ವಾಸ ಉಂಟಾಗಿತ್ತು.

ಈ ಉದ್ಯೋಗದಲ್ಲಿ ಸೇರುವುದಕ್ಕೆ ಮೊದಲು ಸಾಂಬನು ರಾಜನ ಅನುಮತಿ ಪಡೆದು ತನ್ನ ಗ್ರಾಮಕ್ಕೆ ಹೋಗಿ, ಹಿಂದೆ ತಾನು ಕುರಿಮಂದೆ ಕಾಯುತ್ತಾ ತಿರುಗಾಡಿದ ಸ್ಥಳಗಳಲ್ಲೆಲ್ಲಾ ತಿರುಗಾಡಿದನು. ತನ್ನ ವೇಣುವನ್ನು ಊದಿ ಆನಂದಿಸಿಕೊಂಡನು. ತನ್ನವರಿಗೆಲ್ಲಾ ಕಾಣಿಕೆಗಳನ್ನು ಕೊಟ್ಟು ಸಂತೋಷಪಡಿಸಿದನು. ತಂದೆ ತಾಯಿಗಳ ಬಡತನ ತೀರಿ ಅವರು ಸಂತೋಷವಾಗಿರುವುದನ್ನು ನೋಡಿ ಸಂತೋಷಪಟ್ಟನು. "ಮಹಾರಾಜರಲ್ಲಿ ಉದ್ಯೋಗ ಹೇಗಿದೆ?" ಎಂದು ತನ್ನವರು ಕೇಳಿದಾಗ "ಚೆನ್ನಾಗಿಯೇ ಇದೆ ಅಂದುಕೊಳ್ಳಿ. ಹಾಗೆಂದುದರಿಂದ ನೀವು ಯಾರೂ ಈ ಗ್ರಾಮವನ್ನು ಬಿಟ್ಟು ಎಲ್ಲಿಗೂ ಹೋಗಬಾರದು. ರಾಜರ ಹತ್ತಿರವಂತೂ ಕೆಲಸ ಮಾಡಲೇಬಾರದು. ನಿಜವಾದ ಸುಖ ಇರುವುದು ಇಲ್ಲಿಯೇ. ರಾಜೋದ್ಯೋಗವೆಂದರೆ ಸ್ವಲ್ಪ ತಪ್ಪಿದರೂ ಸರ್ವನಾಶವಾಗುವಂಥಾದ್ದು. ಅಷ್ಟೊಂದು ಎಚ್ಚರಿಕೆ ಎಲ್ಲರಿಗೂ ಬಾರದು. ನಿಜವಾದ ಸುಖವಿರುವುದು ಇಲ್ಲಿಯೇ. ನನ್ನ ಹಣೆಬರಹ ಹೀಗಾಯಿತು. ಬಿಡಲು ಸಾಧ್ಯವಿಲ್ಲ" ಎಂದು ಹೇಳಿ, ಅಲ್ಲಿಂದ ಅಮರಾವತಿಗೆ ಹಿಂದಿರುಗಿದನು.



ಸಾಂಬನು ಕೋಶಾಧಿಕಾರವನ್ನು ಪಾಲಿಸಿಕೊಂಡಿರಲು, ಮೂರು ವರ್ಷಗಳ ಮೇಲೆ ವಿಕ್ರಮ ಮಹಾರಾಜನು ತೀರಿ ಹೋದನು. ರಾಜಕುಮಾರನಾದ ಕನಕಸೇನನು ಪಟ್ಟಕ್ಕೆ ಬಂದನು.

ರಾಜಾಧಿಕಾರದ ಉದ್ಯೋಗದಲ್ಲಿರುವ ಅನೇಕರಿಗೆ ಸಾಂಬನೆಂದರೆ ಹಿಡಿಸುತ್ತಿರಲಿಲ್ಲ. ಏಕೆಂದರೆ ಸತ್ತು ಹೋದ ಮಹಾರಾಜನು ಎಲ್ಲ ಉದ್ಯೋಗಸ್ಥ ಅಧಿಕಾರಿಗಳಿಗಿಂತ ಸಾಂಬನ ಮೇಲೆಯೇ ಹೆಚ್ಚು ಆದರವಾಗಿದ್ದುದರಿಂದ ಅವರಿಗೆಲ್ಲ ಅಸೂಯೆ.

ಈಗ ಆ ಅಧಿಕಾರಿಗಳು ಹೊಸ ರಾಜನನ್ನು ಒಳಿತುಮಾಡಿಕೊಂಡು, "ಮಹಾರಾಜರೆ, ನಿಮ್ಮ ತಂದೆಯವರು ಈ ಸಾಂಬನನ್ನು ವಿಪರೀತವಾಗಿ ನಂಬಿದರು. ಅವನು ಖಜಾನೆಯ ಬಹು ದೊಡ್ಡ ಭಾಗವನ್ನು ಕೊಳ್ಳೆ ಹೊಡೆದಿದ್ದಾನೆ. ಅವನ ಮೇಲೆ ಒಂದು ಕಣ್ಣು ಇಟ್ಟಿರಿ!" ಎಂದು ಎಚ್ಚರಿಕೆ ಕೊಟ್ಟರು.

ತನ್ನ ಅಧಿಕಾರಿಗಳು ಹಿತಚಿಂತಕರಾಗಿ ಏನಾದರೂ ಹೇಳಿದರೆ ರಾಜನಾದವನು ಕೇಳದಿರಲು ಸಾಧ್ಯವಿಲ್ಲವಷ್ಟೆ? "ಸಾಂಬನ ದ್ರೋಹವು ಹೊರಬೀಳುವಂತೆ ಏನು ಮಾಡಬೇಕೆಂದು ನಿಮ್ಮ ಅಭಿಪ್ರಾಯ? ನಿಃಶಂಕೆಯಿಂದ ಹೇಳಿರಿ. ತಪ್ಪು ರುಜುವಾದರೆ ಅವನನ್ನು ಶಿಕ್ಷಿಸಲೇ ಬೇಕು." ಎಂದನು ಕನಕಸೇನರಾಜ.

"ನಿಮ್ಮ ತಾತನವರದು ರತ್ನಗಳನ್ನು ಹೊದಿಸಲ್ಪಟ್ಟ ಬಂಗಾರದ ಹಿಡಿಯ ಖಡ್ಗವಿದ್ದಿತು. ಅದನ್ನು ತೋರಿಸುವಂತೆ ಹೇಳಿರಿ" ಎಂದರು ಅಸೂಯೆಯವರು.

ರಾಜನು ಸಾಂಬನನ್ನು ಕರೆದು, "ನಮ್ಮ ತಾತನವರ ಖಡ್ಗ ನಿನ್ನ ಅಧೀನದಲ್ಲಿದೆಯಂತೆ. ಅದನ್ನು ಒಂದು ಸಾರಿ ತಂದು ನನಗೆ ತೋರಿಸು" ಎಂದನು.

"ಮಹಾರಾಜಾ, ನಿಮ್ಮ ತಂದೆಯವರು ಆ ಖಡ್ಗದ ಹಿಡಿಯ ರತ್ನಗಳನ್ನು ತೆಗೆಯಿಸಿ ನಿಮ್ಮ ತಾಯಿಗೆ ಆಭರಣ ಮಾಡಿಸಿದ್ದಾರೆ" ಎಂದನು ಸಾಂಬ. ಅವನು ಹೇಳಿದ ಮಾತು ನಿಜವೆಂದು ನಿರೂಪಿತವಾಯಿತು. ಅದಕ್ಕೆ ಅನೇಕ ಸಾಕ್ಷಿಗಳು ಕೂಡಾ ದೊರೆತುವು. "ನೀವು ಹೇಳಿದ ವಿಷಯದಲ್ಲಿ ಸಾಂಬನು ನಿರ್ದೋಷಿ" ಎಂದನು ರಾಜ ದೂರು ಹೇಳಿದ ಅಧಿಕಾರಿಗಳೊಂದಿಗೆ.

"ಮಹಾಪ್ರಭೂ, ಖಜಾನೆಯಲ್ಲಿರುವ ವಸ್ತುಗಳ ಪಟ್ಟಿಯಲ್ಲಿರುವಂತೆ ಸರಿಯಾಗಿವೆಯೋ ತನಿಖೆ ಮಾಡಿರಿ. ಸರಿಯಾಗಿ ಪರೀಕ್ಷಿಸಿದರೆ ಅವನು ಎಷ್ಟು ಸೊತ್ತು ಒಳಗೆ ಹಾಕಿಕೊಂಡನೆಂದು ಗೊತ್ತಾಗುತ್ತದೆ" ಎಂದರು ದ್ವೇಷಿಗಳು.

ರಾಜನ ಆಜ್ಞೆಯ ಪ್ರಕಾರ ಸಾಂಬನು ತನ್ನ ಅಧೀನದಲ್ಲಿರುವ ಸಾಮಾನುಗಳ, ಧನಗಳ ಎಲ್ಲಾ ವಿವರಗಳ ಪಟ್ಟಿಯನ್ನೂ ಮಾಡಿ ತಂದು ರಾಜನಿಗೆ ತೋರಿಸಿದನು. ಅವುಗಳನ್ನೂ, ಖಜಾನೆಯಲ್ಲಿರುವವುಗಳನ್ನೂ ನೋಡಿದಾಗ, ಚಿಕ್ಕಾಸಿನ ವ್ಯತ್ಯಾಸವೂ ಕಾಣಲಿಲ್ಲ. ರಾಜನೂ ಮಂತ್ರಿಯೂ ಒಂದಕ್ಕೆ ಎರಡೆರಡು ಬಾರಿ ಖಜಾನೆಯ ಪರೀಕ್ಷೆ ನಡೆಸಿದರು.

ವರ್ಷದಿಂದ ವರ್ಷಕ್ಕೆ ಲಾಭಕಾರಿಯಾಗಿ ತುಂಬಿದ ಖಜಾನೆಯನ್ನು ನೋಡಿ ಕನಕಸೇನ ರಾಜನಿಗೆ ಪರಮಾನಂದವಾಯಿತು. ಅಲ್ಲಿರುವ ವಸ್ತು, ಒಡವೆಗಳೆಲ್ಲಾ ಒಪ್ಪ ಓರಣವಾಗಿ ಪರೀಕ್ಷೆಗೆ ಏನೂ ಕಷ್ಟವಿಲ್ಲದಂತೆ ಇಡಲ್ಪಟ್ಟಿದ್ದುವು,

ಇದನ್ನೆಲ್ಲ ನೋಡಿ ಕನಕಸೇನನು ಸಾಂಬನನ್ನು ಹೊಗಳಲು ಬಾಯಿ ತೆರೆಯುತ್ತಿರುವುದನ್ನು ನೋಡಿ ಅಧಿಕಾರಿಗಳಲ್ಲೊಬ್ಬ, ಖಜಾನೆಯ ಗೋಡೆಯಲ್ಲಿದ್ದ ಚಿಕ್ಕದೊಂದು ಕಬ್ಬಿಣದ ಬಾಗಿಲನ್ನು ತೋರಿಸಿ "ಇಲ್ಲಿ ಗೋಡೆಯಲ್ಲೊಂದು ಸುರಂಗವಿರುವ ಹಾಗಿದೆ. ಅದರೊಳಗೆ ಏನಿದೆಯೋ ?" ಎಂದನು.

ಅದನ್ನು ನೋಡಿ ರಾಜನು ಸಾಂಬನ ಕಡೆಗೆ ತಿರುಗಿ, "ಅಂದಹಾಗೆ ಅದೇನು ಕೋಣೆ ? ಅದರೊಳಗೆ ಏನಿದೆ ? ಅದನ್ನೇಕೆ ಈ ಪಟ್ಟಿಯಲ್ಲಿ ತೋರಿಸಲಿಲ್ಲ ?" ಎಂದು ಕೇಳಿದನು.

"ಕ್ಷಮಿಸಬೇಕು ಮಹಾರಾಜರೇ. ಆ ಪುಟ್ಟ ಗೂಡಿನೊಳಗೆ ನನ್ನ ಸ್ವಂತ ಆಸ್ತಿಯಿದೆ. ಅದು ನನ್ನ ಪಿತ್ರಾರ್ಜಿತದ ಹಾಗೆ ನನಗೆ ಅತ್ಯಮೂಲ್ಯವಾದುದರಿಂದ ಅಷ್ಟು ಭದ್ರವಾಗಿರಿಸಿದ್ದೇನೆ." ಎಂದನು ಸಾಂಬ.

ಅವನ ಮಾತುಗಳನ್ನು ಕೇಳಿ ಅಧಿಕಾರಿಗಳು ಸಾಂಬನನ್ನು ಕುರಿತು ಹೇಳಿದ ಚಾಡಿಗಳೆಲ್ಲಾ ನಿಜವಾಗಿರಬೇಕೆಂದು ರಾಜನಿಗೆ ತೋರಿತು. ಅಂತಲೇ ಅವನು ಕೋಪದಿಂದ "ಹಾಗೇನು ಕತೆ ? ಮೊದಲು ಅದನ್ನು ತೆರೆದು ತೋರಿಸು" ಎಂದನು.

ಸಾಂಬನು ಆ ಕಬ್ಬಿಣದ ಬಾಗಿಲನ್ನು ತೆರೆದನು. ಆ ಗೂಡಿನೊಳಗೆ ಕುರುಬನು ಹೊದ್ದುಕೊಳ್ಳುವ ಒಂದು ಕಂಬಳಿಯೂ, ಹಳೆಯ ಪಾದರಕ್ಷೆಗಳೂ, ಒಂದು ಕೊಳಲೂ ಇದ್ದುವು. ದಿನಾ ಅವುಗಳನ್ನು ಶುದ್ಧಪಡಿಸಿಡುವಂತೆ ಕಾಣುತ್ತಿದ್ದುವು.

ರಾಜನು ಅತ್ಯಾಶ್ಚರ್ಯದಿಂದ, "ಇದೇನಾ ನಿನ್ನ ಅಮೂಲ್ಯವಾದ ಆಸ್ತಿಗಳು ?" ಎಂದು ಕೇಳಿದನು.

"ಹೌದು ಮಹಾರಾಜಾ. ನಾನು ನಿಮ್ಮ ತಂದೆಯವರ ಕೈಗೆ ಸಿಗುವುದಕ್ಕೆ ಮೊದಲು ನನಗಿದ್ದ ಆಸ್ತಿಗಳು ಅವೇ. ಇಲ್ಲಿ ಉದ್ಯೋಗದಲ್ಲಿ ಸೇರಿದ ಮೇಲೆ ನನ್ನ ಮನಸ್ಸಿಗೆ ಸುಖವೇ ಇಲ್ಲ. ದಿನಾ ಅದನ್ನು ಒಮ್ಮೆ ನೋಡುತ್ತ, ನೆಮ್ಮದಿಯಾಗಿ ಇಲ್ಲಿ ಕರ್ತವ್ಯ ನಿರ್ವಹಿಸಲು ಸಾಧ್ಯವಾಗಿದೆ" ಎಂದನು ಸಾಂಬ.

ರಾಜನು ಸಾಂಬನ ಮಾತನ್ನು ಕೇಳಿ ಆತನ ಪ್ರಾಮಾಣಿಕತೆಯನ್ನು ಮೆಚ್ಚಿಕೊಂಡು, ಒಂದು ಹೊಸ ಪಾಠವನ್ನು ಕಲಿತನು. ಅವನನ್ನು ಆರಿಸಿಕೊಂಡ ತಂದೆಯ ಸೂಕ್ಷ್ಮ ಬುದ್ಧಿಯ ಮೇಲೆ ಪ್ರತ್ಯೇಕ ಗೌರವ ತಾಳಿದನು. ಸಾಂಬನ ಮೇಲೆ ತಂದೆಗಿಂತ ಹೆಚ್ಚಿನ ಆದರ ತೋರಿದನು. ಅವನ ಮೇಲೆ ಚಾಡಿ ಹೇಳಿದವರನ್ನೆಲ್ಲಾ ತೊಲಗಿಸಿ ಕೈ ತೊಳೆದುಕೊಂಡನು.






# ಕಳ್ಳನ ಪುಣ್ಯ

ಎಂತಹ ಪ್ರಶ್ನೆಗಾದರೂ ಉತ್ತರ ಕೊಟ್ಟು ತಲೆ ಉಳಿಸಿಕೊಳ್ಳ ಬಲ್ಲೆನೆಂಬ ಧೈರ್ಯವುಳ್ಳ ರಾಜಾ ತ್ರಿವಿಕ್ರಮನು ಮತ್ತೆ ಹೋಗಿ ಮರದ ಕೊಂಬೆಯಲ್ಲಿ ನೇತಾಡುತ್ತಿದ್ದ ಶವವನ್ನು ಕೆಳಗಿಳಿಸಿ ತನ್ನ ಭುಜಸ್ಕಂಧ ದಲ್ಲಿ ಹೊತ್ತುಕೊಂಡು ಸ್ಮಶಾನದ ಕಡೆಗೆ ಮೌನವಾಗಿ ನಡೆಯ ತೊಡಗಿದನು. ಆಗ ಶವದೊಳಗಿನ ಬೇತಾಳವು ಮಾತಾಡಲು ತೊಡಗಿ, "ಎಲೈ ಮಹಾರಾಜನೇ, ಇನ್ನೊಬ್ಬರಿಂದ ಕೆಲಸಮಾಡಿಸಿ ಕೊಳ್ಳಬೇಕಾದ ನೀನೇ, ಈ ನಡು ರಾತ್ರಿಯ ಹೊತ್ತಿನಲ್ಲಿ ಇಷ್ಟೊಂದು ಶ್ರಮ ಪಡುವುದನ್ನು ನೋಡಿ ನನಗೆ ಬಹಳ ಖೇದವಾಗು ತ್ತದೆ. ಇದೊಂದು ವಿಚಿತ್ರವಾದ ಹಣೆ ಬರೆಹ ವಿರಬೇಕು. ಹೀಗೆಯೇ ವಿಚಿತ್ರ ಹಣೆ ಬರೆಹದ ಕುಮಾರಿಯೊಬ್ಬಳ ಕಥೆಯನ್ನು ಹೇಳುತ್ತೇನೆ. ಶ್ರಮ ತಿಳಿಯದಂತೆ ಕಥೆ ಕೇಳುತ್ತಾ ನಡೆ" ಎಂದು ಹೇಳಿ ಕಥೆಯನ್ನು ಪ್ರಾರಂಭಿಸಿತು :

ಶ್ರೀರಾಮಚಂದ್ರನು ಪರಿಪಾಲನೆ ಮಾಡಿದ ಅಯೋಧ್ಯಾ ನಗರವನ್ನು, ಒಂದುಕಾಲದಲ್ಲಿ ವೀರ ಕೇತು ಮಹಾರಾಜನು ಪಾಲಿಸಿಕೊಂಡಿದ್ದನು. ಅವನ ಕಾಲದಲ್ಲಿ ಅಯೋಧ್ಯೆಯಲ್ಲಿ ಪ್ರತಿ ದಿನವೂ ಎಲ್ಲಿಯೋ

ಬೇತಾಳ ಕಥೆಗಳು




ಒಂದು ಕಡೆ ವಿಚಿತ್ರ ರೀತಿಯಲ್ಲಿ ಕಳ್ಳತನವಾಗಲು ತೊಡಗಿತು. ಈ ಕಳ್ಳತನದ ಕಾಟವನ್ನು ತಡೆಯಲಾರದೆ, ಪ್ರಜೆಗಳು ಮಹಾರಾಜನ ಹತ್ತಿರ ಹೋಗಿ, "ಮಹಾ ಪ್ರಭೂ ! ಈ ಕಳ್ಳರ ಕಾಟ ತಾಳಲಾಗದಷ್ಟಾಗಿದೆ. ಹೇಗಾದರೂ ನಮ್ಮನ್ನು ಈ ಕಳ್ಳರ ಕಾಟದಿಂದ ಕಾಪಾಡಬೇಕು. ನಾವೆಲ್ಲಾ ಎಷ್ಟು ಕಷ್ಟಪಟ್ಟರೂ ಕಳ್ಳರನ್ನು ಹಿಡಿಯಲು ಸಾಧ್ಯವಾಗಲಿಲ್ಲ. ನಾವು ಎಷ್ಟು ಎಚ್ಚರದಿಂದಿದ್ದರೂ ಯಾವ ಮಾಯದಿಂದಲೋ ಕಳ್ಳತನ ಆಗುತ್ತಾ ಇರುತ್ತದೆ. ಮಾಯಾ ಮಂತ್ರ ತಿಳಿದ ಕಳ್ಳರಾಗಿದ್ದರೂ ಇರಬಹುದು" ಎಂದು ಮೊರೆ ಇಟ್ಟರು.

ವೀರಕೇತು ಮಹಾರಾಜನು ಪ್ರಜೆಗಳಿಗೆ ಸಮಾಧಾನ ಹೇಳಿ ಕಳುಹಿಸಿದ ಮೇಲೆ ಬಹಳ ಆಲೋಚನೆ ಮಾಡಿದನು. ತನ್ನ ರಕ್ಷಕ ಭಟರಲ್ಲಿ ಅತ್ಯಂತ ಸಮರ್ಥರಾದವರಿಗೆ ಬೇರೆ ಬೇರೆ ವೇಷ ಹಾಕಿಸಿ ರಾತ್ರಿಯಲ್ಲಿ ಗಸ್ತು ತಿರುಗಲು ಹೇಳಿದನು. ಅವರು ಕಣ್ಣಿಗೆ ಎಣ್ಣೆ ಹಾಕಿಕೊಂಡು ಪರೀಕ್ಷಿಸುತ್ತ ತಿರುಗಿದರೂ ಕಳ್ಳರಾರೂ ದೊರಕಲಿಲ್ಲ. ಕಳ್ಳತನ ನಡೆಯುವುದು ನಿಲ್ಲಲೂ ಇಲ್ಲ. ಒಬ್ಬ ಕಳ್ಳನನ್ನು ಕೂಡಾ ಗಸ್ತಿಯವರು ಹಿಡಿಯಲಿಲ್ಲ.

ಕಳ್ಳತನ ಮಾಡುವವರು ತುಂಬಾ ಉಪಾಯಶಾಲಿಗಳೆಂದು ನಿರ್ಧರಿಸಿದ ವೀರಕೇತು ರಾಜನು, ಸ್ವತಃ ಕಳ್ಳರನ್ನು ಹಿಡಿಯಲು ಹೊರಟನು. ರಾಜನು ಮಾರುವೇಷದಲ್ಲಿ ಬೀದಿ ಬೀದಿ ತಿರುಗುತ್ತಿರುವಾಗ, ಒಂದು ಕಡೆಯಲ್ಲಿ ವಿಚಿತ್ರ ರೀತಿಯಲ್ಲಿ ಅತ್ತಿತ್ತ ನೋಡುತ್ತ ಒಬ್ಬ ಮನುಷ್ಯನು ನಿಂತಿರುವುದನ್ನು ನೋಡಿದನು.

ರಾಜನು ಅವನ ಹತ್ತಿರ ಹೋದ ಕೂಡಲೇ ಆ ಮನುಷ್ಯ, "ಯಾರು ನೀನು ? ಈ ಸಮಯದಲ್ಲಿ ಏನನ್ನು ಹುಡುಕುತ್ತ ಬರುವಿ ?" ಎಂದು ಪ್ರಶ್ನೆ ಮಾಡಿದನು.

"ನಾನು ಕಳ್ಳ ! ನಿನ್ನ ಹತ್ತಿರ ಏನಿದೆಯೋ ಅದನ್ನೆಲ್ಲ ಒಳ್ಳೇ ಮಾತಿನಲ್ಲಿ ಕೊಡುವಿಯಾ ?" ಎಂದನು ರಾಜ.

"ಎಲ ! ನನ್ನ ಹಾಗಿನವನೇನಾ ನೀನೂ? ಭೇಷ್! ನನ್ನೊಂದಿಗೆ ನನ್ನ ಮನೆಯವರೆಗೆ ಬಾ. ನಾವಿಬ್ಬರೂ ಒಂದೇ ವೃತ್ತಿಯವರಾದುದರಿಂದ, ನಿನಗೆ ತಕ್ಕ ಸ್ನೇಹ ಮರ್ಯಾದೆ ಮಾಡುತ್ತೇನೆ. ಆಗದೆ ?" ಎಂದನು ಆ ವ್ಯಕ್ತಿ.

"ಹಾಗಾದರೆ ನಡೆ" ಎಂದು ರಾಜನು ಅವನೊಂದಿಗೆ ಹೊರಟನು. ಅವನ ಮನೆ ಕಾಡಿನೊಳಗೆ ಭೂಗರ್ಭದಲ್ಲಿ ನಿರ್ಮಿಸಲಾಗಿತ್ತು. ಕಳ್ಳನು ರಾಜನನ್ನು ಆ ಮನೆಯ ಒಂದು ಕೋಣೆಯೊಳಗೆ ಕೂಡಿಸಿ, "ಈಗ ಬರುತ್ತೇನೆ" ಎಂದು ಹೇಳಿ ಪಕ್ಕದ ಕೋಣೆಯೊಳಗೆ ಹೋದನು.

ಆ ಸಮಯದಲ್ಲಿ ದಾಸಿಯೊಬ್ಬಳು ಅಲ್ಲಿಗೆ ಬಂದು, ರಾಜನನ್ನು ನೋಡಿ, "ನೀನು ಯಾರಪ್ಪಾ, ಹೊಸಬನ

ಹಾಗಿದೆ. ಈ ಮನೆಯವನ ಗುರುತು ತಿಳಿದ ಮೇಲೆ ನಿನ್ನ ಆಯುಷ್ಯ ಮುಗಿದ ಹಾಗೆಯೇ ಆಯಿತು. ಬೇಗನೇ ತಪ್ಪಿಸಿಕೊಂಡು ಹೋಗಿ ಬಿಡು" ಎಂದು ಎಚ್ಚರಿಸಿ ಓಡಿ ಹೋದಳು.

ಅವನನ್ನು ಗುರುತಿಸಿದವರೆಲ್ಲಾ ಸಾಯುವುದ ರಿಂದಲೇ ಅವನನ್ನು ಹಿಡಿಯಲು ಸಾಧ್ಯವಿಲ್ಲದೆ ಹೋಗಿದೆಯೆಂದು ರಾಜನಿಗೆ ತಿಳಿಯಿತು. ಇವ ನೊಬ್ಬನೇ ಅನೇಕ ಮಂದಿ ಕಳ್ಳರಹಾಗೆ ಕಳ್ಳತನ ಮಾಡುವವನೆಂದೂ ರಾಜನಿಗೆ ಗೊತ್ತಾಯಿತು.

ರಾಜನು ಅಲ್ಲಿಂದ ತಪ್ಪಿಸಿಕೊಂಡು ಕಾಡಿನೊಳಗೆ ಹೋಗಿ ಸಂಕೇತದ ಸಿಳ್ಳು ಹಾಕಿದನು. ಕೂಡಲೇ ಅವನನ್ನು ದೂರದಲ್ಲಿ ಅನುಸರಿಸಿಕೊಂಡು ಬಂದಿದ್ದ ಆಯುಧಪಾಣಿಗಳಾದ ಅನೇಕ ಮಂದಿ ರಾಜಭಟರು ಓಡಿಬಂದರು.

ರಾಜನು ಆ ಭಟರೊಂದಿಗೆ ಕಳ್ಳನ ನಿವಾಸಕ್ಕೆ ಹೊಕ್ಕನು.

ರಾಜಭಟರಿಗೂ ಆ ಕಳ್ಳನಿಗೂ ಘೋರವಾದ ಯುದ್ಧವು ನಡೆಯಿತು. ಕಳ್ಳನು ಕೇವಲ ಒಂಟಿ ಯಾಗಿದ್ದರೂ ಬಹಳ ಹೊತ್ತು ಹೋರಾಡಿ ಅನೇಕ ಮಂದಿ ರಾಜಭಟರನ್ನು ಕೊಂದನು. ಆದರೆ ತಪ್ಪಿಸಿ ಕೊಳ್ಳಲಾಗಲಿಲ್ಲ. ಕಡೆಗೆ ರಾಜಭಟರು ಅವನನ್ನು ಹಿಡಿದು ಕಟ್ಟಿ ಹಾಕಿದರು.

ವೀರಕೇತು ಮಹಾರಾಜನು ಕಳ್ಳನನ್ನು ಬಂಧಿಸಿ, ನಗರಕ್ಕೆ ಸಾಗಿಸಿಕೊಂಡು ಬಂದನು. ದಾರಿಯುದ್ದಕ್ಕೂ ಆ ಕಳ್ಳನನ್ನು ನೋಡಲು ಜನರು ಗುಂಪಾಗಿ ಕೂಡಿದರು.

ಸಭೆಯಲ್ಲಿ ಅವನ ವಿಚಾರಣೆ ನಡೆಯಿತು. ಬಹಳ ಕಾಲದಿಂದ ಯಾರ ಕಣ್ಣಿಗೂ ಬೀಳದೆ ಕಳ್ಳತನ ಮಾಡಿದವನು ಅವನೇ ಎಂದು ನಿರೂಪಿಸಲ್ಪಟ್ಟಿತು. ಕಳೆದುಕೊಂಡವರ ವಸ್ತು, ಒಡವೆ, ಸೊತ್ತುಗಳೆಲ್ಲಾ ಆ ಕಳ್ಳನ ಭೂ ಗೃಹದಲ್ಲಿ ಸಿಕ್ಕಿದ್ದುವು.



ವೀರಕೇತು ಮಹಾರಾಜನು ಆ ಕಳ್ಳನನ್ನು ಶೂಲಕ್ಕೇರಿಸುವಂತೆ ಆಜ್ಞೆ ಮಾಡಿದನು.

ರಾಜಭಟರು ಕಳ್ಳನನ್ನು ಶೂಲಕ್ಕೇರಿಸಲು ಊರ ಹೊರಗೆ ಕರೆದುಕೊಂಡು ಹೋಗ ತೊಡಗಿದರು. ಆಗ ಒಂದು ಅದ್ಭುತವು ನಡೆಯಿತು.

ಅಯೋಧ್ಯಾ ನಗರದ ದೊಡ್ಡ ವೈಶ್ಯರಲ್ಲೊಬ್ಬ ನಾದ ರತ್ನದತ್ತನೆಂಬವನ ಮಗಳು, ರತ್ನವತಿ ಎಂಬ ಯುವತಿ ಆ ಕಳ್ಳನನ್ನು ನೋಡಿ, ತನ್ನ ತಂದೆಯನ್ನು ಕರೆದು, "ಅಪ್ಪಾ, ನಾನು ಕನಸಿನಲ್ಲಿ ಕಂಡ ವರನು ಅವನೇ. ಆ ಕಳ್ಳನೊಂದಿಗೇ ನನ್ನ ಮದುವೆ ಮಾಡಿಸಿರಿ. ನಾನು ಕನಸಿನಲ್ಲಿ ವರಿಸಿದ್ದು ಅವನನ್ನೇ !" ಎಂದಳು. ಅದನ್ನು ಕೇಳಿ ರತ್ನದತ್ತನು ಬೆಚ್ಚಿಬಿದ್ದು ಮೂಕ ವಿಸ್ಮಿತನಾದನು.

ರತ್ನವತಿ ಅವನ ಏಕ ಮಾತ್ರ ಪುತ್ರಿಕಾರತ್ನ. ಅವಳನ್ನು ರತ್ನದತ್ತನು ಅತ್ಯಂತ ಪ್ರೀತಿಯಿಂದ ಬೆಳೆ ಸಿದ್ದಾನೆ. ರತ್ನವತಿಯ ಅಪೂರ್ವ ಸೌಂದರ್ಯವನ್ನು

ನೋಡಿ, ಕೋಟೀಶ್ವರರಾದ ವೈಶ್ಯ ಕುಮಾರರೂ, ರಾಜಕುಮಾರರೂ ಅವಳನ್ನು ಮದುವೆಯಾಗಲು ತವಕಿಸಿದ್ದರು. ರತ್ನವತಿ ಅವರೆಲ್ಲರನ್ನೂ ನಿರಾಕರಿಸಿದ್ದಳು. ತಾನು ಕನಸಿನಲ್ಲಿ ಒಬ್ಬನನ್ನು ಮದುವೆಯಾಗಿದ್ದೇನೆಂದೂ, ಎಂದೋ ಒಂದು ದಿನ ಅವನು ಬರುವನೆಂದೂ ತಂದೆ ತಾಯಿಗಳೊಂದಿಗೆ ಹೇಳಿದ್ದಳು.

"ಇದೆಂತಹ ಭ್ರಾಂತಿಯಮ್ಮಾ ನಿನಗೆ? ದೊಡ್ಡ ದೊಡ್ಡ ರಾಜಕುಮಾರರನ್ನೆಲ್ಲಾ ನಿರಾಕರಿಸಿ, ಸುಳ್ಳಿನ ಕನಸನ್ನು ನಂಬಿ, ಪ್ರಜೆಗಳ ಶತ್ರುವಾದ ಈ ಕಳ್ಳ ಕೊರಮನನ್ನು ಗಂಡನೆನ್ನುವೆಯಲ್ಲಾ ! ಅವನನ್ನು ರಾಜಭಟರು ಶೂಲಕ್ಕೇರಿಸಲು ಒಯ್ಯುತ್ತಿದ್ದಾರೆ. ಅಂಥವನನ್ನು ಹೇಗೆ ಮದುವೆಯಾಗಲು ಸಾಧ್ಯ ?" ಎಂದನು ರತ್ನದತ್ತ.

ರತ್ನವತಿ ತಂದೆಯ ಮಾತನ್ನು ಕೇಳಿಸಿಕೊಳ್ಳಲಿಲ್ಲ. ಅವನೇ ತನ್ನ ಗಂಡನೆಂದು ಹಟ ಹಿಡಿದಳು. "ಕಳ್ಳನಾದರೂ ಸುಳ್ಳನಾದರೂ, ಕೊಲೆಗಾರನೇ ಆದರೂ ಗಂಡನು ಗಂಡನೇ. ಅವನಿಗೆ ಶಿಕ್ಷೆಯಾದರೆ ಅದು ನನ್ನ ಗಂಡನಿಗೆ ಶಿಕ್ಷೆಯಾಯಿತೆಂದೇ ತಿಳಿಯುತ್ತೇನೆ. ನನ್ನ ಹಣೆಯಲ್ಲಿ ಅಷ್ಟೇ ಬರೆದುದು ಎಂದು ಭಾವಿಸುತ್ತೇನೆ. ನಿಮ್ಮ ಕಣ್ಣೆದಿರು ನನಗೆ ಮದುವೆಯಾಗಬೇಕೆಂದಿದ್ದರೆ ಅವನೊಂದಿಗೆ ನನಗೆ ಮದುವ ಮಾಡಿರಿ. ನಿಮಗೆ ಅದು ಸಾಧ್ಯವಾಗದಿದ್ದರೆ ಅವನೊಂದಿಗೇ ನಾನೂ ಸಾಯುತ್ತೇನೆ, ಅಷ್ಟೇ ಹೊರತು ಯಾವ ಪರಿಸ್ಥಿತಿಯಲ್ಲಿಯೂ ನನ್ನ ನಿಶ್ಚಯ ಮಾತ್ರ ಬದಲಾಗದು" ಎಂದಳು ರತ್ನಾವತಿ.

ಮಗಳು ಹೇಳುವುದನ್ನು ಕೇಳಿ ರತ್ನದತ್ತನು ಬಹಳ ಗಾಬರಿಯಾದನು. ತನ್ನ ಮಗಳ ನಿಶ್ಚಯವು ಬದಲಾಗುವಂತಹುದಲ್ಲವೆಂದು ಅವನಿಗೆ ಗೊತ್ತಾಗಿ ಹೋಯಿತು. ಅವನು ಕೂಡಲೇ, ವೀರಕೇತು ಮಹಾರಾಜನ ಬಳಿಗೆ ಹೋಗಿ, "ಮಹಾಪ್ರಭೂ ! ತಾವು ಹಿಡಿದ ಆ ಕಳ್ಳನನ್ನು ನನಗೆ ಕೊಟ್ಟುಬಿಡಬೇಕೆಂದು ಬೇಡುತ್ತೇನೆ, ಅದಕ್ಕೆ ಪ್ರತಿಯಾಗಿ ನನ್ನ ಹತ್ತಿರವಿರುವ ನೂರು ಕೋಟಿ ಸುವರ್ಣವನ್ನೂ ಕೊಟ್ಟು ಬಿಡುತ್ತೇನೆ. ಹೀಗೆ ಮಾಡಿ ನನ್ನ ಮಗಳನ್ನು



ತಾವು ಉಳಿಸಬೇಕು" ಎಂದು ಪ್ರಾರ್ಥಿಸಿಕೊಂಡನು. ರಾಜನು ಅದಕ್ಕೇನೂ ಒಪ್ಪಲಿಲ್ಲ. ಅಯೋಧ್ಯಾ ನಗರವನ್ನೆಲ್ಲಾ ಏಕಮಾತ್ರನಾದ ಒಬ್ಬನೇ ಕಾಡಿ ಪೀಡಿಸಿದ ಚೋರಾಗ್ರೇಸರನನ್ನು ಬಿಟ್ಟು ಕೊಡಲು ರಾಜನು ಸುತರಾಂ ಒಪ್ಪಲಿಲ್ಲ. ರತ್ನದತ್ತನು ಹತಾಶ ನಾಗಿ ಮನೆಗೆಬಂದು ನೋಡಿದಾಗ, ರತ್ನವತಿ ಸ್ನಾನ ಮಾಡಿ ಮದುಮಗಳ ಶೃಂಗಾರದಲ್ಲಿ ತಯಾರಾಗಿದ್ದಳು.

"ನನ್ನ ಪ್ರಯತ್ನ ಫಲಿಸಲಿಲ್ಲ ಮಗಳೇ. ಕಳ್ಳ ನನ್ನು ಬಿಟ್ಟು ಕೊಡಲು ರಾಜನು ಒಪ್ಪಲಿಲ್ಲ. ನನಗಿರುವುದನ್ನೆಲ್ಲಾ ಕೊಡುವೆನೆಂದರೂ ರಾಜನು ಕೇಳಲಿಲ್ಲ. ನಿನ್ನ ಇಷ್ಟದಂತಹ ಮದುವೆ ಅಸಂಭವ !" ಎಂದು ರತ್ನದತ್ತನು ದುಃಖಿಸುತ್ತಾ ಹೇಳಿದನು.

"ಮದುವೆಯಾಗದಿದ್ದರೆ ಸಹ ಗಮನ ಇದ್ದೇ ಇದೆ ಅಪ್ಪಾ." ಎಂದಳು ರತ್ನವತಿ. ಅದನ್ನು ಕೇಳಿ ರತ್ನ ದತ್ತನು ತಲೆ ತಿರುಗಿ ಕುಸಿದು ಬಿದ್ದನು.

ರತ್ನವತಿ ಪಲ್ಲಕಿಯನ್ನೇರಿ ವಧ್ಯ ಭೂಮಿಗೆ ಕರೆದೊಯ್ಯುವಂತೆ ಬೋವಿಗಳಿಗೆ ಹೇಳಿದಳು.

ಅವಳ ಹಿಂದೆಯೇ ಅಳುತ್ತಾ ತಂದೆ ತಾಯಿಗಳೂ ಹೊರಟರು. ಅವರೆಲ್ಲ ವಧ್ಯ ಭೂಮಿಗೆ ಹೋದಾಗ ಆಗತಾನೇ ಕಟುಕರು ಕಳ್ಳನನ್ನು ಶೂಲಕ್ಕೇರಿಸಿ ಆಗಿತ್ತು. ಕಳ್ಳನು ಸಾವು ಬದುಕುಗಳ ಅಂಚಿನಲ್ಲಿ ನರಳಿಕೊಂಡಿದ್ದನು.

ರತ್ನದತ್ತನು ತನ್ನ ಕುಮಾರಿಯನ್ನು ಕಳ್ಳನ ಹತ್ತಿರ ಕರೆದುಕೊಂಡು ಹೋಗಿ, "ನೋಡಪ್ಪಾ, ಈ ನನ್ನ ಮಗಳಿಂದಾಗಿ ನೀನು ನನ್ನ ಅಳಿಯನಾಗಿರುವಿ. ಇವಳ ಹೆಸರು ರತ್ನವತಿ. ನಿನ್ನನ್ನೇ ಸ್ವಪ್ನದಲ್ಲಿ ವರಿಸಿ ನೀನೇ ಗಂಡನೆಂದು ಹಟ ಹಿಡಿದು ನಿನ್ನೊಂದಿಗೆ ಸಹಗಮನಕ್ಕೂ ಸಿದ್ಧಳಾಗಿ ಇಲ್ಲಿಯವರೆಗೆ ಬಂದಿ ದ್ದಾಳೆ." ಎಂದನು.

ಈ ಮಾತು ಕೇಳಿ ಕಳ್ಳನು ಒಂದು ಸಾರಿ ರತ್ನ ವತಿಯನ್ನು ನೋಡಿ ಕಣ್ಣೀರು ಸುರಿಸುತ್ತಾ ಅತ್ತನು. ಅದು ಪ್ರತ್ಯೇಕವಾಗಿ ಅವನಿಗೆ ಬಂದ ಅಳು. ಆಮೇಲೆ ಸ್ವಲ್ಪ ಹೊತ್ತು ನಕ್ಕನು. ನಗುತ್ತಾ ಪ್ರಾಣಬಿಟ್ಟನು. ರತ್ನವತಿ ತಾನು ನಿರ್ಣಯಿಸಿಕೊಂಡ ಗಂಡನ ಕಳೇ



ಒರವನ್ನು ತೆಗೆದುಕೊಂಡು ಸ್ಮಶಾನಕ್ಕೆ ಸಾಗಿಸಿದಳು. ಅಲ್ಲಿ ಚಿತಿಪೇರಿಸಿ ಅದರ ಮೇಲೆ ಅವನ ಶವವನ್ನು ಮಡಿಲಲ್ಲಿಟ್ಟುಕೊಂಡು ಬೆಂಕಿ ಹಚ್ಚಲು ಹೇಳಿದಳು.

ಮನಸ್ಸಿನಲ್ಲಿ ಗಂಡನೆಂದು ತಿಳಿದ ಮಾತ್ರಕ್ಕೇ ಸಹಗಮನದವರೆಗೂ ಸಿದ್ಧಳಾದ ರತ್ನವತಿಯ ಪತಿಭಕ್ತಿಗೆ ಸಂತೋಷಪಟ್ಟು, ಕಾಲಭೈರವನು ಪ್ರತ್ಯಕ್ಷನಾಗಿ, "ಅಮ್ಮಾ, ನಿನ್ನ ಪತಿಭಕ್ತಿ ಅಸಾಧಾರಣವಾದುದು. ನಿನಗೆ ಏನು ವರಬೇಕೋ ಕೇಳು, ಕೊಡುತ್ತೇನೆ" ಎಂದನು.

"ದೇವಾ, ನನ್ನ ತಂದೆ ತಾಯಿಗಳಿಗೆ ನಾನು ಒಬ್ಬಳೇ ಮಗಳು. ನಾನು ಹೋದರೆ ಅವರು ದಿಕ್ಕಿಲ್ಲದವರಾಗುತ್ತಾರೆ. ಅವರಿಗೆ ಪುತ್ರರು ಹುಟ್ಟುವಂತೆ ಅನುಗ್ರಹಿಸು, ಮಕ್ಕಳನ್ನು ನೋಡಿ ಅವರು ನನ್ನನು ಮರೆಯುತ್ತಾರೆ" ಎಂದಳು ರತ್ನವತಿ ವಿನಯದಿಂದ.

ಕಾಲ ಭೈರವನು ನಕ್ಕು, "ನೀನು ಕೇಳಿದ ಪ್ರಕಾರವೇ ಮಾಡುತ್ತೇನೆ. ಆದರೆ ನಿನಗಾಗಿ ನೀನು ಏನೂ ಕೇಳುವುದಿಲ್ಲವೆ?" ಎಂದು ಕೇಳಿದನು,

"ನನಗೆ ನನ್ನ ಗಂಡನೊಂದಿಗೆ ಇರಬೇಕೆಂಬುದರ ಹೊರತು ಬೇರೆ ಯಾವ ಕೋರಿಕೆಯೂ ಇಲ್ಲ" ಎಂದಳು ರತ್ನವತಿ.

"ಆ ಕೋರಿಕೆಯನ್ನೂ ತೀರಿಸುತ್ತೇನೆ" ಎಂದು ಕಾಲ ಭೈರವನು ಕಳ್ಳನನ್ನು ಬದುಕಿಸಿ ಅಂತರ್ಧಾನನಾದನು. ರತ್ನದತ್ತನು ಕಳ್ಳನನ್ನು ಮನೆಗೆ ಕರೆದುಕೊಂಡು ಬಂದು, ವೈಭವದಿಂದ ತನ್ನ ಮಗಳಿಗೆ ಮದುವೆ ಮಾಡಿದನು.

ಹೀಗೆ ಕಥೆಯನ್ನು ಮುಗಿಸಿ ಬೇತಾಳವು, "ರಾಜಾ, ಶೂಲದಲ್ಲಿ ಸಾಯುವ ಮೊದಲು ರತ್ನವತಿಯ ಸಮಾಚಾರವನ್ನು ತಿಳಿದ ಕಳ್ಳನು ಮೊದಲು ಅತ್ತನೇಕೆ? ಆ ಮೇಲೆ ನಗಾಡಿದನೇಕೆ? ಇದಕ್ಕೆ ತಕ್ಕ ಉತ್ತರ ಗೊತ್ತಿದ್ದೂ ಹೇಳದೆ ಹೋದರೆ ನಿನ್ನ ತಲೆ ನುಚ್ಚುನೂರಾಗಿ ಸಿಡಿದು ಹೋಗುತ್ತದೆ" ಎಂದು ಸುಮ್ಮನಾಯಿತು.

"ಅಂತ್ಯಕಾಲದಲ್ಲಿ ಆಕಸ್ಮಿಕ ಬಂಧುಗಳಾಗಿ ಬಂದವರ ಋಣವನ್ನು ತೀರಿಸದೆ ಸಾಯುತ್ತೇನೆಂದು ಕಳ್ಳನಿಗೆ ಅಳು ಬಂದಿತು. ಎಂತೆಂತಹ ರಾಜಕುಮಾರರನ್ನೂ ನಿರಾಕರಿಸಿ ತನ್ನನ್ನೇ ವರಿಸಿ, ತಾನು ಕಳ್ಳನೆಂದು ತಿಳಿದರೂ ಸಾಯುವ ವರೆಗೆ ಸಿದ್ಧಳಾದುದನ್ನು ನೆನೆದು ಅವನಿಗೆ ನಗುವೂ ಬಂದಿತು" ಎಂದು ತ್ರಿವಿಕ್ರಮನು ಕೂಡಲೇ ಉತ್ತರ ಕೊಟ್ಟನು.

ಅವನಿಗೆ ಮೌನಭಂಗವಾದ ಕೂಡಲೇ ಬೇತಾಳವು ಶವ ಸಮೇತವಾಗಿ ರಾಜನ ಹೆಗಲಿನಿಂದ ಹಾರಿ ಹೋಗಿತ್ತು!





# ನಂಬುಗೆಯ ಕನಸು

**ನೂ**ರಾರು ವರ್ಷಗಳ ಹಿಂದೆ ಇಂದ್ರಪ್ರಸ್ಥ ನಗರದಲ್ಲಿ ಒಬ್ಬ ದೊಡ್ಡ ಧನಿಕನಿದ್ದನು. ಅವನು ಧರ್ಮಕಾರ್ಯಗಳಲ್ಲಿ ನಿರತನಾಗಿರುತ್ತ ಸ್ವತಃ ಸುಖಭೋಗಗಳಲ್ಲಿ ಮುಳುಗಿ ತೇಲಿಕೊಂಡಿದ್ದುದರಿಂದ, ಏನೇನೋ ನಷ್ಟಗಳುಂಟಾಗಿ, ಇದ್ದ ಆಸ್ತಿ ಪೂರಾ ಹೋಗಿ ಬಡತನದ ಸ್ಥಿತಿಗೆ ಇಳಿದನು. ಒಂದು ಕಾಲದಲ್ಲಿ ಜೀಜೀ ಎಂದು ಬದುಕಿದವನು ಪರಮ ದರಿದ್ರನಾಗಿ ಹೋದನು. ದರಿದ್ರನಾದವನು ಧನಿಕನಾದರೆ ಎಷ್ಟು ಸಂತೋಷವೋ, ಧನಿಕನು ದರಿದ್ರನಾದರೆ ಅದರ ಇಮ್ಮಡಿಯಷ್ಟು ಕಷ್ಟವೇ!

ಈ ಸ್ಥಿತಿಯಲ್ಲಿ ಒಂದು ದಿನ ರಾತ್ರಿ ಅವನು ಗಾಢ ನಿದ್ದೆಯಲ್ಲಿರುವಾಗ ಒಂದು ಕನಸು ಬಿತ್ತು. ಆ ಕನಸಿನಲ್ಲಿ ಮಹಾವಿಷ್ಣು ಕಾಣಿಸಿ, "ನೀನು ಕೂಡಲೇ ಹೊರಟು ಪಾಟಲೀಪುತ್ರ ನಗರಕ್ಕೆ ಹೋಗು. ಅಲ್ಲಿ ನಿನಗೆ ಧನಲಾಭ ಉಂಟಾಗುತ್ತದೆ. ಅದರಿಂದ ಮತ್ತೆ ನೀನು ಧನಿಕನಾಗಿ ಮೊದಲಿನಂತೆ ಸುಖವಾಗಿರುವಿ" ಎಂದು ಹೇಳಿದನು.

ಕನಸಿನಲ್ಲಿ ಮಹಾವಿಷ್ಣು ಹೇಳಿದ ಮಾತಿನ ಮೇಲೆ ನಂಬುಗೆ ಇಟ್ಟು, ಆ ನಿರ್ಭಾಗ್ಯದವನು ಒಬ್ಬಂಟಿಗನಾಗಿ ಕಾಲು ನಡಿಗೆಯಿಂದ ಪ್ರಯಾಣ ಮಾಡುತ್ತ ಅನೇಕ ದಿನಗಳ ಮೇಲೆ ಪಾಟಲೀಪುತ್ರ ನಗರವನ್ನು ತಲುಪಿದನು. ಆಗ ಅವನು ತುಂಬಾ ಆಯಾಸಗೊಂಡಿದ್ದನು.

ಮೊದಲೇ ಅವನಿಗೆ ಆ ನಗರವು ಹೊಸತು. ಅದರ ಮೇಲೆ ಅವನು ನಗರವನ್ನು ಪ್ರವೇಶಿಸಿದಾಗ ಕತ್ತಲೆಯಾಗಿತ್ತು. ಅಮಾವಾಸ್ಯೆಯಾದುದರಿಂದ ಚಂದ್ರನೂ ಇಲ್ಲ. ಮೋಡಗಳು ಕವಿದುದರಿಂದ ನಕ್ಷತ್ರಗಳೂ ಕಾಣಲಿಲ್ಲ.

ಆದುದರಿಂದ ಅವನು ಹೇಗೋ ತಡಕಾಡಿಕೊಂಡು ಒಂದು ಗುಡಿಯನ್ನು ತಲುಪಿದನು. ಕತ್ತಲೆಯಲ್ಲೇ ಒಂದು ಮೂಲೆಗೆ ಹೋಗಿ ಮಲಗಿ ಗಾಢನಿದ್ರೆಗೆ ಜಾರಿದನು.

ನಗರದಲ್ಲೆಲ್ಲಾ ಸದ್ದಡಗಿದ ಸ್ವಲ್ಪಹೊತ್ತಿನ ಮೇಲೆ ಆ ಗುಡಿಯ ಪಕ್ಕದಲ್ಲಿದ್ದ ಒಂದು ಮನೆಯೊಳಗೆ ಕಳ್ಳರು ಪ್ರವೇಶಿಸಿದರು.

ಆ ಮನೆಯ ಯಜಮಾನನು ಕಳ್ಳರ ಸದ್ದಿನಿಂದ ಎಚ್ಚೆತ್ತು "ಕಳ್ಳರು! ಕಳ್ಳರು!" ಎಂದು ಗಟ್ಟಿಯಾಗಿ ಅರಚಿದನು. ಕ್ಷಣದೊಳಗೆ ಸುತ್ತುಮುತ್ತಿನವರೆಲ್ಲಾ ಅಲ್ಲಿಗೆ ಓಡಿ ಬಂದರು.

ಡಿ. ಸುಶೀಲಕುಮಾರಿ

Seven and add

ಕಳ್ಳರಿಗೆ ಕದ್ದುಕೊಳ್ಳಲಾಗಲಿಲ್ಲ. ಅವರು ಗೋಡೆಯ ಮೇಲಿನಿಂದ ಗುಡಿಯ ಆವರಣದೊಳಗೆ ಹಾರಿ, ಮಂಟಪದ ಬದಿಯಿಂದಾಗಿ ಓಡಿ ಕತ್ತಲೆಯಲ್ಲಿ ಮಾಯವಾಗಿ ಹೋದರು. ಅವರನ್ನು ಓಡಿಸುತ್ತಾ ಬಂದ ಜನರು, ಗುಡಿಯ ಆವರಣದೊಳಗೆಲ್ಲಾ ಹುಡುಕಿ, ಆಗತಾನೇ ಗದ್ದಲದಿಂದ ಎದ್ದು ಕುಳಿತಿದ್ದ ಪರದೇಶಿಯನ್ನು ಹಿಡಿದು, ಕೈಗಳನ್ನು ಕಟ್ಟಿ ಕೋತ್ವಾಲನ ಕಚೇರಿಗೆ ಎಳೆದುಕೊಂಡು ಹೋದರು.

ದೂರ ಪ್ರಯಾಣ ಮಾಡಿ ಕೊಳೆ ಹಿಡಿದ ದುಸ್ತಿನಲ್ಲಿದ್ದ ಆ ದೊಡ್ಡ ಮನುಷ್ಯ ಕಳ್ಳನ ಹಾಗೇ ಕಾಣಿಸಿದನು. ಕೋತ್ವಾಲನು ಭಟರಿಂದ ಅವನನ್ನು ಹೊಡೆಯಿಸಿ: "ನಿಜ ಹೇಳು. ಎಲ್ಲಿ ನಿನ್ನ ಜತೆಗಾರ? ನೀವೆಷ್ಟು ಮಂದಿ ಇದ್ದೀರಿ? ಎಲ್ಲೆಲ್ಲಿ ಕದ್ದಿದ್ದೀರಿ? ಎಲ್ಲಿ ಬಚ್ಚಿಟ್ಟಿದ್ದೀರಿ?" ಎಂದು ಕೇಳಿದನು.

"ಅಯ್ಯಾ! ನಾನು ಕಳ್ಳನೇ ಅಲ್ಲ. ನಾನು ಇಂದ್ರಪ್ರಸ್ಥದಿಂದ ಬಂದವನು. ಒಳ್ಳೆಯ ಸ್ಥಿತಿಯಲ್ಲಿದ್ದವನು. ಭಗವಂತನು ಎರಡು ಸಾರಿ ನನಗೆ ಮೋಸ ಮಾಡಿದ. ಮೊದಲು ನನಗಿದ್ದ ಧನವೆಲ್ಲಾ ಹೋಯಿತು. ಅಷ್ಟಕ್ಕೇ ಬಿಡದೆ ಮಹಾವಿಷ್ಣು ಸ್ವಪ್ನದಲ್ಲಿ ಬಂದು ನನ್ನನ್ನು ಪಾಟಲೀಪುತ್ರಕ್ಕೆ ಹೋದರೆ ಹಣ ಸಿಗುತ್ತದೆ ಎಂದ. ಆ ಮಾತು ನಂಬಿ ಶ್ರಮಪಟ್ಟು, ಇಂದ್ರಪ್ರಸ್ಥದಿಂದ ಇಲ್ಲಿಯ ವರೆಗೆ ನಡೆದೇ ಬಂದೆ. ರಾತ್ರಿ ದಿಕ್ಕುಗಾಣದೆ ಗುಡಿಯ ಮೂಲೆಯಲ್ಲಿ ಮಲಗಿದೆ. ಬೆಳಗಾಗುವ ಮೊದಲೇ ನಿಮ್ಮಿಂದ ಹೀಗೆ ಪೆಟ್ಟುಗಳನ್ನು ತಿಂದೆ" ಎಂದನು ಪರದೇಶಿ.

ಈ ಮಾತನ್ನು ಕೇಳಿ ಕೋತ್ವಾಲನು ನಕ್ಕು, "ಎಲೋ ಹುಚ್ಚಾ! ಯಾರಾದರೂ ಕನಸನ್ನು ನಂಬುತ್ತಾರೇನು? ಕೆಲವು ದಿನಗಳ ಕೆಳಗೆ ನನಗೆ ಕೂಡಾ ಕನಸಿನಲ್ಲಿ ದೇವರು ಕಾಣಿಸಿ ಇಂದ್ರಪ್ರಸ್ಥದ ಗಣೇಶ ಗುಡಿಯ ಕೆರೆಯ ಬದಿಯ ಹೊನ್ನೇಮರದ ಕೆಳಗೆ ಅಗೆದರೆ ದೊಡ್ಡ ನಿಧಿ ಸಿಗುತ್ತದೆ ಎಂದನು. ನಾನು ಆ ಮಾತು ನಂಬಿ ಇಂದ್ರಪ್ರಸ್ಥಕ್ಕೆ ಹೋಗುತ್ತಿದ್ದರೆ ಹುಚ್ಚಾ ಎನ್ನುತ್ತಿದ್ದರು. ಇಂಥಾ ಹುಚ್ಚುತನ ಬಿಟ್ಟು ಇಲ್ಲಿ ಅಲೆಯಬೇಡ. ನಿನ್ನ ಇಂದ್ರಪ್ರಸ್ಥಕ್ಕೇ ಹೋಗಿ ನೆಮ್ಮದಿಯಾಗಿರು" ಎಂದು ಬುದ್ಧಿ ಹೇಳಿದನು.

ದರಿದ್ರನಾದ ಮಾಜೀ ಧನಿಕನು ಕೂಡಲೇ ಇಂದ್ರಪ್ರಸ್ಥಕ್ಕೆ ಹಿಂದಿರುಗಿ, ಆ ಕೊತ್ವಾಲನು ಹೇಳಿದ ಜಾಗದಲ್ಲಿ ಅಗೆದು ನೋಡಿದನು. ಅಲ್ಲಿ ಅವನಿಗೆ ನಿಜವಾಗಿಯೇ ದೊಡ್ಡದೊಂದು ನಿಧಿ ದೊರಕಿತು. ಆದರಿಂದ ಅವನು ಮತ್ತೆ ಧನಿಕನಾಗಿ ಮೊದಲಿನಂತಾದನು. ಈ ವಿಧವಾಗಿ ಅವನ ಕನಸು ನಿಜವಾಯಿತು.





# ಕೋಳಿಯ ಬೆಲೆ

ಒಂದಾನೊಂದು ಗ್ರಾಮದಲ್ಲಿ ಪಾರಣ್ಣನೆಂಬೊಬ್ಬ ಕಮ್ಮಾರನಿದ್ದನು. ಕಷ್ಟ ಜೀವಿಯಾದ ಅವನು ಅನುದಿನವೂ, ಇದ್ದುದನ್ನು ಉಂಡುಕೊಂಡು ತೃಪ್ತಿಯಾಗಿದ್ದರೂ, ಹಬ್ಬ ಹಾಡಿ ಬಂದಾಗ ಮಾತ್ರ ಏನಾದರೂ ವಿಶೇಷದ ಅಡಿಗೆ ಮಾಡಿಸುತ್ತಿದ್ದ. ಹಾಗೆ ಒಂದು ಸಾರಿ ಸಂಕ್ರಾಂತಿ ಬಂತು. ಕೋಳಿ ಕೊಂಡು ಕೊಂಡು ಬನ್ನಿ ಎಂದಳು ಹೆಂಡತಿ.

ಆ ಗ್ರಾಮದಲ್ಲಿ ಕೊಟ್ರಪ್ಪ ಎಂಬವನೇ ದೊಡ್ಡ ಆಸ್ತಿವಂತ. ಬೇಕಾದಷ್ಟು ಕೋಳಿಗಳನ್ನು ಬೆಳೆಸುತ್ತಿದ್ದ. ಪಾರಣ್ಣ ಕೊಟ್ರಪ್ಪನ ಬಳಿಗೆ ಹೋಗಿ ತನಗೊಂದು ಕೋಳಿಬೇಕೆಂದು ಕೇಳಿದನು.

ಕೊಟ್ರಪ್ಪನು ಪಾರಣ್ಣನಿಗೆ ಒಂದು ಹೇಂಟೆ ಕೋಳಿಯನ್ನು ಕೊಟ್ಟು, "ನಿನ್ನ ವಿಷಯ ನನಗ್ಗೊತ್ತು ಪಾರಣ್ಣ. ಸಂಕ್ರಾಂತಿ ನೆಪದಲ್ಲಿ ವಿಶೇಷ ಅಡಿಗೇ ಮಾಡಿಸುವಾ ಅಂತ ಬಂದಿದ್ದೀ. ಇದಕ್ಕೆ ಹಣ ಕೊಟ್ಟು, ಬೇರೆ ಖರ್ಚಿಗೆ ಹಣ ಇಲ್ಲಾ ಅನ್ನಿಸಿಕೊಳ್ಳಬೇಡ. ಹಣವಿದ್ದಾಗ ತಂದುಕೊಡು. ಬರೆದಿಟ್ಟುಕೊಳ್ತೀನೆ" ಎಂದನು. ನಿಜಕ್ಕೂ ಅವನಿಗೆ ಬೇರೆ ಖರ್ಚುಗಳೂ ಇದ್ದುವು.

ಕೊಟ್ರಪ್ಪನನ್ನು ಅವನು ಬಾಯಿ ತುಂಬಾ ಮೆಚ್ಚಿ, "ಇದರ ಬೆಲೆ ಎಷ್ಟು ?" ಎಂದು ಕೇಳಿದನು.

"ಅದೆಷ್ಟಂತ ನಿನಗ್ಗೊತ್ತಿಲ್ವೇ ? ಸಾವಕಾಶವಾಗಿ ಬಾ, ತೆಕ್ಕೊಳ್ತೀನೆ ಬಿಡು". ಎಂದ ಕೊಟ್ರಪ್ಪ.

ಕೆಲವುದಿನಗಳ ಮೇಲೆ ಪಾರಣ್ಣ ಕೊಟ್ರಪ್ಪನಿಗೆ ಕೋಳಿಯ ಬೆಲೆ ಕೊಟ್ಟುಬಿಡೋಣವೆಂದು ಸ್ವಲ್ಪ ಹಣವಿಟ್ಟುಕೊಂಡು ಹೋದನು.

"ಈಗ ಕೆಲಸದ ಗಡಿಬಿಡಿಯಲ್ಲಿದ್ದೇನೆ. ಆ ಲೆಕ್ಕ ನೋಡ ಬೇಕಾದರೆ ಬಹಳ ವೇಳೆ ಬೇಕು. ಇನ್ನೊಂದು ದಿನ ಬಾರಯ್ಯಾ" ಎಂದ ಕೊಟ್ರಪ್ಪ.

"ಕೋಳಿಯ ಬೆಲೆ ತೆಗೆದುಕೊಳ್ಳುವುದಕ್ಕೆ ಲೆಕ್ಕ ನೋಡಲಿಕ್ಕೆ ಏನಿದೇರೀ ? ಎಷ್ಟೆಂದರೆ ಅಷ್ಟು ಕೊಟ್ಟು ಹೋಗಿ ಬಿಡುತ್ತೇನೆ" ಎಂದನು ಪಾರಣ್ಣ.

"ಹಾಗೆಲ್ಲಾ ಕಣ್ಣು ಮುಚ್ಚಿ ಹೇಗೆ ತೆಗೆದುಕೊಳ್ಳಲಿ ? ಬಹಳ ಉದ್ದದ ಲೆಕ್ಕ ನೋಡಬೇಕು. ಈಗ ವೇಳೆಯಿಲ್ಲ" ಎಂದ ಕೊಟ್ರಪ್ಪ.

ಹೀಗೆ ಪಾರಣ್ಣ ಕೊಟ್ರಪ್ಪನ ಸುತ್ತಲೂ ಮೂರು ನಾಲ್ಕು ಬಾರಿ ಅಲೆದಾಡಿದ. ನಾಲ್ಕನೇ ಸಾರಿ ಹೋದಾಗ ಕೊಟ್ರಪ್ಪ ಕಾಗದ ಪೆನ್ಸಿಲು ತೆಗೆದು

ಬಿ. ರಾಮರಾಜ

ಕೊಂಡು, ಕೋಳಿಕೊಂಡು ಕೊಂಡುದನ್ನು ಗುರುತಿಸಿದ ಪುಸ್ತಕವನ್ನು ನೋಡಿ, ಏನೇನೋ ಲೆಕ್ಕ ಹಾಕಿ, ಹೊಡೆದು ಮತ್ತೆ ಕೂಡಿಸಿ, "ಇದು ಸರಿಯಾದ ಲೆಕ್ಕ. ಇಕೋಪ್ಪ, ಪಾರಣ್ಣಾ, ನೀನು ಕೊಂಡು ಕೊಂಡ ಕೋಳಿ ಬಾಬ್ತಿನ ಲೆಕ್ಕ ಎಷ್ಟಾಗುತ್ತೆ ಅಂದರೆ ಎಲ್ಲಾ ಕೂಡಿಸಿದರೆ ಇನ್ನೂರ ಐವತ್ತು ರೂಪಾಯಿ ಚಿಲ್ಲರೆ ದುಡ್ಡು ಆಗುತ್ತೆ. ಆ ಚಿಲ್ಲರೆ ಬಿಡು. ಇನ್ನೂ ರೈವತ್ತು ಕೊಟ್ಟುಬಿಡು. ಗುರುತು ಹೊಡೆದು ಬಿಡುತ್ತೇನೆ" ಎಂದನು.

ತಾನು ತಿಂದ ಕೋಳಿಯಬೆಲೆ ಇನ್ನೂರೈವತ್ತು ರೂಪಾಯಿ ಎಂಬುದನ್ನು ಕೇಳಿ, ಪಾರಣ್ಣನ ಬಾಯಿ ಯಿಂದ ಸ್ವಲ್ಪ ಹೊತ್ತು ಮಾತೇ ಹೊರಡಲಿಲ್ಲ.

"ಒಂದು ಹೇಂಟಿ ಕೋಳಿಯ ಬೆಲೆ ಇನ್ನೂರೈವತ್ತು ರೂಪಾಯಿಯಾ? ಎಲ್ಲಿಯೂ ಕೇಳಿಲ್ಲವಲ್ಲಾ! ಅದೇನಾದರೂ ಬಂಗಾರದ ಕೋಳಿಯಾ?" ಎಂದು ಅವನು ಕೊಟ್ರಪ್ಪನನ್ನು ನೋಡಿ ಕೇಳಿದನು.

"ಒಂದಕ್ಕೆ ಎರಡು ಸಾರಿ ಲೆಕ್ಕ ಮಾಡಿದ್ದೇನೆ. ಅಷ್ಟೇ ಬರುತ್ತೆ. ಯಾವ ತಪ್ಪೂ ಇಲ್ಲ. ಬೇಕಾದರೆ ಲೆಕ್ಕ ಗೊತ್ತಿದ್ದವರ ಹತ್ತಿರ ಮಾಡಿಸಿಕೋ. ನೀನು ಕೊಂಡುಕೊಂಡದ್ದು ಹೇಂಟೆಕೋಳಿ. ಅದು ಇಷ್ಟರ ವರೆಗೆ ಎಷ್ಟು ಮೊಟ್ಟೆ ಇಡುತ್ತದೆ? ಅವೆಲ್ಲಾ ಮರಿಗಳಾಗಿ ಬೆಳೆದು ಎಷ್ಟು ಮೊಟ್ಟೆ ಇಟ್ಟಿರ ಬಹುದು? ಅವುಗಳಲ್ಲಿ ಎಷ್ಟು ಹುಂಜಗಳಾದುವು? ಎಷ್ಟು ಹೇಂಟೆಗಳಾದುವು? ಸರಾಸರಿ ಕಡಿಮೆ ಪಕ್ಷ ಹಿಡಿದೇ ಲೆಕ್ಕಿಸಿದ್ದೇನೆ. ಇವತ್ತಿನವರೆಗಷ್ಟೇ ಹಿಡಿದಿದ್ದೇನೆ." ಎಂದನು ಕೊಟ್ರಪ್ಪ.

"ಈ ಸಂಗತಿ ಏನು ಅಂತ ನಮ್ಮ ಪಟೇಲರನ್ನು ಕೇಳಿ ನೋಡುತ್ತೇನೆ. ಅದು ಸ್ಪಷ್ಟವಾಗದೆ ನಾನೊಂದು ಕಾಸೂ ಕೊಡಲಾರೆ" ಎಂದ ಪಾರಣ್ಣ.

"ಮಹಾರಾಜನಾಗಿ ಕೇಳಪ್ಪ. ಇನ್ನೂ ನಿನಗೆ ನಂಬುಗೆಯಿರುವವರ ಹತ್ತಿರ ಕೇಳು ನಾಲ್ಕು ದಿನ ತಡವಾದರೂ ನಾನು ಲೆಕ್ಕ ಹಿಡಿಯೋದಿಲ್ಲ" ಎಂದ ಕೊಟ್ರಪ್ಪ.



ಇಬ್ಬರೂ ಪಟೇಲನಲ್ಲಿ ಹೋದರು "ನೋಡೀ ಪಟೇಲ್ರೇ, ಈ ಪಾರಣ್ಣ ಹೋದ ಸಂಕ್ರಾಂತಿಯ ದಿನಕ್ಕೆ ನನ್ನ ಕೈಯಿಂದ ಒಂದು ಹೇಂಟೆ ಕೋಳಿ ತೆಗೆದು ಕೊಂಡು ಬೆಲೆ ಆಮೇಲೆ ಕೊಡುತ್ತೇನೆಂದು ಹೇಳಿ ಹೋದ. ಅದನ್ನೀಗ ಕೊಡುತ್ತೇನೆ. ಎಷ್ಟಾಯಿತು ? ಅಂತ ಕೇಳಿದ. ಎರಡು ತಿಂಗಳಾಯಿತು ನೋಡಿ. ಆ ಕೋಳಿ ಎಷ್ಟು ಮೊಟ್ಟೆ ಇಡುತ್ತೋ, ಅವುಗಳಲ್ಲಿ ಎಷ್ಟು ಮರಿಗಳಾಗಿ ಬೆಳೆದು ಎಷ್ಟು ಮೊಟ್ಟೆಗಳು ಬರುತ್ತವೋ ಅಂತ ಇವತ್ತಿನವರೆಗೆ ಲೆಕ್ಕ ಹಾಕಿ ತೋರಿಸಿದೆ. ಇನ್ನೂರೈವತ್ತು ರೂಪಾಯಿ ಆಯಿತು, ಕೊಡಪ್ಪಾ ಅಂದೆ. ನೀವೂ ನೋಡಿ. ಇದರಲ್ಲಿ ತಪ್ಪೇನಾದರೂ ಇದ್ದರೆ ಹೇಳಿಬಿಡಿ. ಇವನಿಂದ ಅನ್ಯಾಯವಾಗಿ ನಾನೇಕೆ ಹಣ ಪಡೆಯಲಿ ?" ಎಂದನು ಕೊಟ್ರಪ್ಪ.

ಕೊಟ್ರಪ್ಪನ ಹಂಗಿಗೆ ಒಳಗಾಗಿರುವ ಪಟೇಲ ಆ ಲೆಕ್ಕದ ಕಾಗದವನ್ನು ನೋಡಿ, ಗೊಣಗಿ, ತಲೆ ಯಾಡಿಸಿ, "ಏನೋ ಪಾರಣ್ಣಾ, ಈ ಲೆಕ್ಕದಲ್ಲಿ ತಪ್ಪೇನೂ ಇಲ್ಲವಲ್ಲಾ ?" ಎಂದನು.

"ಅದೇ ನಾನೂ ಹೇಳಿದೆ. ಪಾರಣ್ಣನಿಗೆ ನನ್ನ ಮಾತಿನಲ್ಲಿ ನಂಬುಗೆ ಆಗದೆ ಇಲ್ಲಿಯವರೆಗೆ ಕರ ಕೊಂಡು ಬಂದು ನಿಮಗೆ ಉಪದ್ರ ಕೊಡ ಬೇಕಾಯಿತು. ಓದು ಬರೆಹಬಾರದು, ಲೆಕ್ಕಪಕ್ಕ ತಿಳಿಯದು ಪಾಪ ! ಈಗ ನಂಬುಗೆ ಆಯಿತೇನಪ್ಪಾ ಪಾರಣ್ಣಾ ?" ಎಂದನು ಕೊಟ್ರಪ್ಪ.

"ಲೆಕ್ಕ ಅಂದರೆ ಹೀಗೂ ಇರುತ್ತೆಯೇ ? ಇನ್ನೂ ಯಾರಾದರೂ ಒಬ್ಬರನ್ನ ಕೇಳಿ ನೋಡುತ್ತೇನೆ" ಎಂದನು ಪಾರಣ್ಣ.

"ಕೇಳು ಕೇಳು. ನಾಲ್ಕು ದಿನ ಮಾತ್ರ ಲೆಕ್ಕ ಬಿಡುತ್ತೇನೆ ಅಂದದ್ದು ನೆನಪಿದೆಯಷ್ಟೇ ?" ಎಂದನು ಕೊಟ್ರಪ್ಪ.

ಪಾರಣ್ಣ ಹತಾಶನಾಗಿ ಅಲ್ಲಿಂದ ದಿಗಿಲು ಮೊಗ ದೊಂದಿಗೆ ಮನೆಗೆ ಹಿಂದಿರುಗುವಾಗ, ವಿಠಲ ಮಾಸ್ತರು ಅವನ ಇದಿರಾಗಿ ಬರುತ್ತ, "ಏನೋ ಪಾರಣ್ಣಾ. ಬಹಳ ಚಿಂತೆಯಿಂದ ಇರುವೆಯಲ್ಲಾ ? ಏನಾಯಿತಪ್ಪಾ ?" ಎಂದು ಕೇಳಿದರು.



ಪಾರಣ್ಣ ಅವರೊಂದಿಗೆ ಕೊಟ್ರಪ್ಪನಿಗೂ ತನಗೂ ನಡೆದ ಲೆಕ್ಕದ ಸಮಾಚಾರವನ್ನೆಲ್ಲಾ ಹೇಳಿದನು.

"ಆ ಪಟೇಲ ಕೂಡಾ ನಿನ್ನನ್ನು ಮುಳುಗಿಸಿದನೇ ? ನಾಳೆ ಸಂತೇ ಮೈದಾನದ ಕಟ್ಟೆಗೆ ಆ ಕೊಟ್ರಪ್ಪನ್ನ ಕರಕೊಂಡು ಬಾ. ಪಟೇಲ ಹೇಗೂ ವೀಳ್ಯ ಕೊಂಡುಕೊಳ್ಳಲು ಸಂಜೆಗೆ ಅಲ್ಲಿಗೆ ಬರುತ್ತಾನೆ. ನಾಲ್ಕು ಮಂದಿ ದೊಡ್ಡವರು ಹೊಸ ವೀಳ್ಯ ತೆಗೆದುಕೊಂಡು ತಿನ್ನುತ್ತ ಹರಟೇ ಹೊಡೆಯುವ ಜಾಗತಾನೆ ? ನಾನೂ ಬಂದು ಆ ಲೆಕ್ಕ ನೋಡುತ್ತೇನೆ ಅಂತ ಕೊಟ್ರಪ್ಪನಿಗೆ ಹೇಳು." ಎಂದರು ವಿಠಲ ಮಾಸ್ತರು.

ಪಾರಣ್ಣ ಕೊಟ್ರಪ್ಪನ ಹತ್ತಿರ ಹೋಗಿ ಆ ಮಾತನ್ನು ಹೇಳಿ, "ಸಂತೇ ಮೈದಾನದ ಕಟ್ಟೆಗೆ ಬಂದರೆ ವಿಠಲಮಾಸ್ತ್ರು ಲೆಕ್ಕ ನೋಡಿ ಸರಿಯೋ ತಪ್ಪೋ ಹೇಳ್ತೇನೆ ಅಂದರು" ಎಂದನು.

"ಹಾಗೇ ಆಗಲಿ. ಅವರು ಮಾತ್ರ ನನ್ನ ಲೆಕ್ಕ ತಪ್ಪು ಅಂದಾರೇ ?" ಎಂದನು ಕೊಟ್ರಪ್ಪ.

"ನನಗೆ ಲೆಕ್ಕಾಪಕ್ಕಾ ಏನುಗೊತ್ತಿದೆ ? ಮಾಸ್ತರು ನಾಲ್ಕು ಮಂದೀ ಮುಂದೆ ಲೆಕ್ಕ ಸರಿ ಉಂಟು ಅಂದರೆ ಕೊಟ್ಟೇ ಬಿಡ್ತೇನೆ" ಎಂದ ಪಾರಣ್ಣ.

ಮರುದಿನ ಸಾಯಂಕಾಲ ಸಂತೇ ಮೈದಾನದ ಕಟ್ಟೆಯಲ್ಲಿ, ಊರ - ಹಿರಿಯರು ಸೇರಿಕೊಂಡರು. ಆಗ ತಾನೇ ಹೊಸತಾಗಿ ಕೊಂಡು ಕೊಂಡ ಎಲೆ ಅಡಿಕೆಯನ್ನು ತಿನ್ನುತ್ತ ಲೋಕಾಭಿರಾಮವಾಗಿ ಮಾತಾಡಿಕೊಳ್ಳುವ ಜಾಗವದು. ಕೊಟ್ರಪ್ಪನೂ, ಪಟೇಲರೂ ಬಂದರು. ಪಾರಣ್ಣ ವಿಠಲಮಾಸ್ತರರ ದಾರಿಕಾಯುತ್ತಾ ಇದ್ದ. ಹೊತ್ತಾದಂತೆ ಮಾಸ್ತರೂ ಮೋಸಮಾಡುವರೇನೋ ಅನಿಸಿತು. ದೀಪ ಹಚ್ಚುವ ಹೊತ್ತಾಗುವಾಗ ವಿಠಲಮಾಸ್ತರು ಬಂದರು.

"ನಾನು ಬರುವಾಗ ಸ್ವಲ್ಪ ತಡವಾಯ್ತು. ಮತ್ತೇನಿಲ್ಲ. ಕೂಲಿಯವರು ಇವತ್ತು ಬಿತ್ತನೆ ಮಾಡಲೇಬೇಕೆಂದು ಹಟಹಿಡಿದರು. ಅದಕ್ಕೆ ಬಿತ್ತುವ ಬೀಜ ಬೇಗಬೇಗ ಹುರಿದು ಕೊಡಬೇಕಾಗಿಬಂತು." ಎಂದರು.

"ಬಿತ್ತನೇ ಬೀಜ ಹುರಿಯುವುದೆಂದರೆ ಅದು ಮೊಳಕೆ ಬರೋದುಂಟೆ ?" ಎಂದ ಪಟೇಲ ವ್ಯಂಗ್ಯವಾಗಿ. ಕೊಟ್ರಪ್ಪ ಮೊದಲಾದವರು ನಕ್ಕರು.

"ಯಾಕಿಲ್ಲ ? ಪಾರಣ್ಣ ತಿಂದ ಹೇಂಟೆ ಕೋಳಿ ಮೊಟ್ಟೆಯಿಟ್ಟು ಮರಿಗಳನ್ನು ಬೆಳೆಸಿ ಅವೆಲ್ಲ ಮೊಟ್ಟೇ ಇಟ್ಟವೇ ಅಂತ ಕೊಟ್ರಪ್ಪನವರು ಲೆಕ್ಕ ಹೇಳಿದ್ದಾರೆ. ಪಟೇಲ್ರೂ ಹೌದೆಂದಿದ್ದಾರೆ ! ಹಾಗಿರುವಾಗ ಹುರಿದ ಬೀಜಗಳಿಂದ ಪರಿಮಳದ ಬೆಳೆ ಬಾರದಿರುತ್ತೆಯೇ ?" ಎಂದರು ವಿಠಲಮಾಸ್ತರು.

ಎಲ್ಲರೂ ಗೊಳ್ಳನೆ ನಕ್ಕರು. ಪಟೇಲ ಕತ್ತಲೆಯಲ್ಲಿ ಜಾರಿಕೊಂಡ. ಕೊಟ್ರಪ್ಪ ಪಾರಣ್ಣನ ಹತ್ತಿರ ಕೋಳಿಯ ಬೆಲೆ ಕೇಳುವ ಗೋಜಿಗೇ ಬರಲಿಲ್ಲ.





# ನರಕವಾಸಿ

ಬ್ರಹ್ಮದತ್ತನು ಕಾಶೀರಾಜ್ಯವನ್ನು ಪರಿಪಾಲನೆ ಮಾಡಿಕೊಂಡಿದ್ದ ಕಾಲದಲ್ಲಿ, ನಗರದಲ್ಲಿ ದೊಡ್ಡ ಧನಿಕನಾದ ಒಬ್ಬನ ಮಗನ ಹೆಸರು ಮಿತ್ರವಿಂದಕನೆಂದು. ಹೆಸರು ಒಳ್ಳೆಯದಾಗಿದ್ದರೂ ಈ ಮಿತ್ರವಿಂದಕನು ದಯೆ, ದಾಕ್ಷಿಣ್ಯ, ದಾನ, ಧರ್ಮಗಳೇನೂ ಅರಿಯದ ಪಾಪಾತ್ಮನಾಗಿದ್ದನು.

ಧನಿಕನು ತೀರಿ ಹೋದ ಮೇಲೆ ತಾಯಿ ಕುಮಾರ ಮಿತ್ರವಿಂದಕನೊಂದಿಗೆ, "ಅಪ್ಪಾ, ಇನ್ನು ನೀನು ಮೊದಲಿನ ಹಾಗಿರಬಾರದು, ಕನಿಕರಬೇಕು. ದಾನ ಧರ್ಮಗಳನ್ನು ಮಾಡು. ಧರ್ಮವನ್ನು ಅನುಸರಿಸಿ ನಡೆ." ಎಂದು ಮುಂತಾಗಿ ಬುದ್ಧಿ ಹೇಳಿದಳು. ಆದರೆ ತಾಯಿಯ ಹಿತ ಬೋಧನೆಗಳು ಅವನ ಕಿವಿಗೆ ಏರಲೇ ಇಲ್ಲ.

ಹೀಗಿರುವಾಗ ಕಾರ್ತೀಕ ಪೌರ್ಣಮಿ ಬಂದಿತು. ಮಿತ್ರವಿಂದಕನೊಂದಿಗೆ ಅವನ ತಾಯಿ, "ಅಪ್ಪಾ, ಈ ದಿನ ಪುಣ್ಯದಿನವಾಗಿದೆ. ರಾತ್ರಿ ಬೆಳ ತನಕ ವಿಹಾರ ಮಂಟಪದಲ್ಲಿ ಧರ್ಮೋಪದೇಶ ಮಾಡುತ್ತಾರೆ. ನೀನು ಅಲ್ಲಿಗೆ ಹೋಗಿ ಎಲ್ಲರೊಂದಿಗೆ ಪೂಜೆ ನಡೆಸಿ, ಉಪದೇಶ ಕೇಳಿ, ಧರ್ಮ ಭಿಕ್ಷುಗಳನ್ನು ಮನೆಗೆ ಕರೆದುಕೊಂಡು ಬಾ. ನಿನಗೆ ಸಾವಿರ ರೂಪಾಯಿ ಕೊಡುತ್ತೇನೆ" ಎಂದಳು.

ಹಣದ ಆಶೆಯಿಂದ ಮಿತ್ರ ವಿಂದಕನು ಸರಿ ಎಂದು ಒಪ್ಪಿದನು.

ಅವನು ಉಪದೇಶ ಕೇಳಲು ಹೋದನೇ ಹೊರತು, ಒಂದು ಮೂಲೆಯಲ್ಲಿ ಮಲಗಿ ನಿದ್ದೆ ಮಾಡಿದನು. ಬೆಳಗಾದ ಮೇಲೆ ಎದ್ದು ಮುಖ ತೊಳೆದುಕೊಂಡು, ಮನೆಗೆ ಹಿಂದಿರುಗಿ ಬಂದನು. ಅವನು ಒಬ್ಬನೇ ಬಂದುದನ್ನು ನೋಡಿ, "ಧರ್ಮ ಬೋಧಕ ಭಿಕ್ಷುವನ್ನು ಕರೆದುಕೊಂಡು ಬಾ ಅಂದೆ ನಲ್ಲಾ? ಕರೆಯಲಿಲ್ಲವೇ?" ಎಂದು ತಾಯಿ ಕೇಳಿದಳು.

"ಸುಮ್ಮನೆ ಇಲ್ಲಿಯವರೆಗೆ ಏಕೆ ಅವರನ್ನು ಕರೆದುಕೊಂಡು ಬರಲಿ? ನನಗೇನೂ ಅಗತ್ಯ ಕಾಣಲಿಲ್ಲ. ಅವರು ಹೇಳುವುದನ್ನೆಲ್ಲಾ ಕೇಳಿದೆನು. ಸಾಕು" ಎಂದನು ಮಿತ್ರವಿಂದಕ.

ಊಟವಾದ ಮೇಲೆ ತಾಯಿ ಅವನಿಗೆ ತಾನು ಹೇಳಿದಂತೆ ಸಾವಿರ ರೂಪಾಯಿಗಳನ್ನು ಕೊಟ್ಟಳು. ಆ ಹಣವನ್ನು ತೆಗೆದುಕೊಂಡು ಮಿತ್ರ ವಿಂದಕನು ಹೊರಟನು. ಆ ಹಣದಿಂದ ವ್ಯಾಪಾರವನ್ನು



ಪ್ರಾರಂಬಿಸಿ, ಬೇಗದಲ್ಲಿ ಇಪ್ಪತ್ತು ಲಕ್ಷ ಸಂಪಾದಿಸ ಬೇಕೆಂದು ಅಂದು ಕೊಂಡನು. ಹಾಗೆಯೇ ವ್ಯಾಪಾರ ಪ್ರಾರಂಭಿಸಿ, ಮರೆ ಮೋಸಗಳನ್ನು ಅವಲಂಬಿಸಿ ಬೇಗದಲ್ಲೇ ಇಪ್ಪತ್ತು ಲಕ್ಷ ಸಂಪಾದಿಸಿಯೂ ಅವನಿಗೆ ತೃಪ್ತಿಯಾಗಲಿಲ್ಲ.

ಸಮುದ್ರ ವ್ಯಾಪಾರ ಮಾಡಿದರೆ ಕೋಟಿಗಟ್ಲೆ ಲಾಭಬರುತ್ತೆ ಎಂದುಕೊಂಡು, ಮಿತ್ರ ವಿಂದಕನು ಒಂದು ಹಡಗನ್ನು ಏರ್ಪಡಿಸಿಕೊಂಡು, ಅದರಲ್ಲಿ ಸರಕುಗಳನ್ನು ಏರಿಸಿ, ತಾನು ಸಮುದ್ರಲ್ಲಿ ವ್ಯಾಪಾರಕ್ಕೆ ಹೋಗುವೆನೆಂದು ತಾಯಿಯೊಡನೆ ಹೇಳಲು ಮನೆಗೆ ಬಂದನು.

ಅದನ್ನು ಕೇಳಿ ತಾಯಿ ಕಣ್ಣೀರು ಸುರಿಸುತ್ತ, "ಅಪ್ಪಾ, ನನಗೆ ನೀನೊಬ್ಬನೇ ಮಗ. ನೀನು ಇಷ್ಟು ಲಾಭ ಸಂಪಾದಿಸಿದ್ದಾಯಿತಷ್ಟೆ ? ಇನ್ನೂ ಹಣ ಸಂಪಾದಿಸಿ ಏನು ತಾನೇ ಮಾಡುವಿ ? ಸಮುದ್ರ ಪ್ರಯಾಣವು ಕ್ಷೇಮವಾದ ದಾರಿಯಲ್ಲ. ನನ್ನ ಮಾತು ಕೇಳು. ಈ ಪ್ರಯಾಣವನ್ನು ಬಿಡು. ಇರುವುದರಲ್ಲಿ ತೃಪ್ತನಾಗಿ ಸಂತೋಷದಿಂದ ಮನೆ ಯಲ್ಲೇ ಇದ್ದು ಬಿಡು " ಎಂದಳು.

ಮಿತ್ರವಿಂದಕನು ತಾಯಿಯ ಮಾತನ್ನು ಕೇಳದೆ, ಹೋಗಿ ತೀರವೆನೆಂದು ಮೂರ್ಖಪಟ್ಟು ಹಿಡಿದನು. ತಾಯಿ ಅವನ ಕೈ ಹಿಡಿದು ಅಂಗಲಾಚಿಕೊಂಡಳು. ಅವನು ತಾಯಿಯನ್ನು ಹೊಡೆದು ದೂಡಿ, ಕೈ ಬಿಡಿಸಿಕೊಂಡು ಹೊರಟು ಹೋದನು.

ಆ ದಿನವೇ ಅವನ ಹಡಗು ಸಮುದ್ರದಲ್ಲಿ ಹೊರಟಿತು. ಅದು ಮಹಾ ಸಮುದ್ರವನ್ನು ಸೇರಿ ಕೊಂಡ ಮೇಲೆ ಏಳುದಿನಗಳವರೆಗೆ ಸರಿಯಾಗಿಯೇ ಪ್ರಯಾಣ ಸಾಗಿತು. ಆದರೆ ಎಂಟನೇ ದಿನ ಹಡಗು ನಡು ಸಮುದ್ರದಲ್ಲಿ ಸುಮ್ಮನೆ ನಿಂತಿತು. ಎಷ್ಟು ಪ್ರಯತ್ನಿಸಿದರೂ ಹಡಗು ಕದಲಲೇ ಇಲ್ಲ. ಯಾವುದೋ ಅಗೋಚರ ಶಕ್ತಿ ಎಳೆದು ನಿಲ್ಲಿಸಿದ ಹಾಗಿತ್ತು. ಈ ದುರ್ಘಟನೆಗೆ ಕಾರಣರಾದವರು ಹಡಗಿನಲ್ಲೇ ಇದ್ದಾರೆಂಬ ನಂಬುಗೆಯಲ್ಲಿ ನಾವಿಕರು ಚೀಟೀ ಹಾಕಿದರು. ಎತ್ತಿಕೊಂಡ ಚೀಟಿಯಲ್ಲಿ ಮಿತ್ರವಿಂದಕನ ಹೆಸರು ಬಂತು. ನಾವಿಕರು ಮೂರು ಸಾರಿ ಚೀಟಿ ಹಾಕಿ ನೋಡಿದರು. ಮೂರು ಸಾರಿಯೂ ಮಿತ್ರವಿಂದಕನ ಹೆಸರೇ ಬಂದಿತು. ಇನ್ನು ಸಂದೇಹವೇನಿಲ್ಲ.

ನಾವಿಕರು ಮಿತ್ರವಿಂದಕನಿಗೆ ಒಂದು ತೆಪ್ಪವನ್ನು ಕೊಟ್ಟು ಅದರಲ್ಲಿ ಅವನನ್ನು ಕೂಡಿಸಿ, ಸಮುದ್ರ ದಲ್ಲಿ ಬಿಟ್ಟರು. ಮರುಕ್ಷಣದಲ್ಲಿ ಹಡಗು ಶರವೇಗ ದಿಂದ ಮುಂದಕ್ಕೆ ಹೋಯಿತು.

ಕಾಲಕ್ರಮದಲ್ಲಿ ಮಿತ್ರವಿಂದಕನು ತನ್ನ ತೆಪ್ಪದ ಮೇಲೆ ಒಂದಾನೊಂದು ದ್ವೀಪವನ್ನು ಸೇರಿದನು. ಆ ದ್ವೀಪದಲ್ಲಿ ಅವನಿಗೊಂದು ಸ್ಫಟಿಕದ ಭವನವು ಕಾಣಿಸಿತು. ಅದರಲ್ಲಿ ನಾಲ್ಕು ಹೆಣ್ಣು ಪಿಶಾಚಿಗಳು ವಾಸವಾಗಿದ್ದುವು. ಈ ಪಿಶಾಚಿಗಳು ಒಂದು ವಾರದ

ವರೆಗೆ ಪಾಪದ ಪ್ರಾಯಶ್ಚಿತ್ತಕ್ಕಾಗಿ ಕಠೋರವಾದ ವ್ರತನಿಯಮಗಳನ್ನು ಹಿಡಿಯುತ್ತವೆ.

ಮಿತ್ರವಿಂದಕನು ಆ ಪಿಶಾಚಿಗಳೊಂದಿಗೆ ಒಂದು ವಾರದವರೆಗೆ ಇಂದ್ರ ಭೋಗಗಳನ್ನು ಅನುಭವಿಸಿದನು, ಪಿಶಾಚಿಗಳು ವ್ರತವನ್ನು ಹಿಡಿದ ಕೂಡಲೇ ಅಲ್ಲಿ ಅವನಿಗೆ ಬೇಸರವಾಗಿ, ತನ್ನ ತೆಪ್ಪದ ಮೇಲೆ ಹೊರಟುಬಿಟ್ಟನು.



ಅವನು ಸಮುದ್ರದಲ್ಲಿ ಹೋಗುತ್ತಿರಲು ಮತ್ತೊಂದು ದ್ವೀಪವು ತಗಲಿತು. ಅಲ್ಲಿ ಎಂಟು ಮಂದಿ ಪಿಶಾಚಿನಿಯರಿದ್ದರು. ಮಿತ್ರ ವಿಂದಕನು ಅವರೊಂದಿಗೆ ಕೂಡಾ ಒಂದು ವಾರದವರೆಗೆ ಸುಖವಾಗಿ ಕಳೆದು, ಅವರು ಕೂಡಾ ಕಠೋರ ವ್ರತಗಳನ್ನು ಪ್ರಾರಂಭಿಸಿದ ಕೂಡಲೇ ತನ್ನ ತೆಪ್ಪದ ಮೇಲೆ ಕುಳಿತುಕೊಂಡು ಮತ್ತೆ ಸಮುದ್ರದಲ್ಲಿ ಹೊರಟನು.

ಈ ವಿಧವಾಗಿ ಅವನು ಮತ್ತೊಂದು ದ್ವೀಪದಲ್ಲಿ ಹದಿನಾರು ಮಂದಿ ಪಿಶಾಚಿನಿಯರೊಂದಿಗೂ, ಅಲ್ಲಿಂದ ಹೊರಟು ಬೇರೊಂದು ದ್ವೀಪದಲ್ಲಿ ಮೂವತ್ತೆರಡು ಮಂದಿ ಪಿಶಾಚಿನಿಯರೊಂದಿಗೂ ಒಂದೊಂದು ವಾರವನ್ನು ಕಳೆದು, ಕಡೆಗೆ ತನ್ನ ತೆಪ್ಪದ ಮೇಲೆ ಹೊಸ ಬಗೆಯ ಒಂದು ದ್ವೀಪವನ್ನು ಸೇರಿದನು.

ಆ ದ್ವೀಪದಲ್ಲಿ ದೊಡ್ಡದೊಂದು ನಗರವಿದ್ದಿತು. ಅದರ ಸುತ್ತಲೂ ಕೋಟೆಯ ಗೋಡೆಯೂ, ಆ ಗೋಡೆಯಲ್ಲಿ ನಾಲ್ಕು ದಿಕ್ಕಿನಲ್ಲಿ ನಾಲ್ಕು ದ್ವಾರಗಳೂ ಇದ್ದುವು. ನಿಜಕ್ಕೂ ಅದು ಉಸ್ಸದವೆಂಬ ನರಕ ದ್ವೀಪ. ಆದರೆ ಮಿತ್ರವಿಂದಕನಿಗೆ ಅದು ನರಕದ ಹಾಗೆ ಕಾಣಲಿಲ್ಲ. ಸುಂದರವೂ ಸುಖ ಕರವೂ ಆದ ನಗರದ ಹಾಗೆ ಕಂಡಿತು. "ನಾನು ಈ ನಗರದಲ್ಲಿ ಪ್ರವೇಶಿಸಿ ರಾಜನಾಗಿದ್ದರೆ ಎಷ್ಟು ಒಳ್ಳೆಯದಿತ್ತು!" ಅಂದುಕೊಂಡನು.

ಆ ನಗರದಲ್ಲಿ ಮಿತ್ರವಿಂದಕನಿಗೆ ಒಬ್ಬ ಮನುಷ್ಯನು ಕಾಣಿಸಿದನು. ಅವನು ತನ್ನ ತಲೆಯ ಮೇಲೆ ತಿರುಗುತ್ತಿರುವ ಅಸಿಧಾರಾ ಚಕ್ರವನ್ನು ಹೊತ್ತುಕೊಂಡಿದ್ದನು. ಅದರ ಅಂಚು ಹರಿತವಾಗಿದ್ದುದರಿಂದ ಆ ಚಕ್ರವು ಅವನ ತಲೆಯ ಸುತ್ತಲೂ ಕೊರೆದುಕೊಳ್ಳುತಿತ್ತು. ತಲೆಯಿಂದ ಸುತ್ತಲೂ ರಕ್ತವು ಒಸರುತ್ತಿದ್ದಿತು. ಆ ಮನುಷ್ಯನ ಶರೀರದ ಐದು ಭಾಗಗಳು ಶೃಂಖಲೆಯಿಂದ ಬಂಧಿಸಲ್ಪಟ್ಟಿತ್ತು. ಅವನು ನೋವಿನಿಂದ ಹಾಹೂ ಎಂದು ನರಳುತ್ತಿದ್ದನು.

ಇದನ್ನೆಲ್ಲ ನೋಡುವಾಗ ಮಿತ್ರವಿಂದಕನಿಗೆ ಆ ಮನುಷ್ಯನು ಆ ನಗರದ ರಾಜನೆಂದು ತೋರಿತು. ಅಸಿಧಾರಾ ಚಕ್ರವು ಅವನ ಕಣ್ಣಿಗೆ ಪದ್ಮ ಕಿರೀಟದ ಹಾಗೆ ಕಂಡಿತು. ಅವನ ಶರೀರವನ್ನು ಬಂಧಿಸಿದ ಶೃಂಖಲೆಗಳು ಅಲಂಕಾರ ಭೂಷಣಗಳಾಗಿ ತೋರಿದುವು. ಅವನ ನರಳಿಕೆಯ ಆರ್ತನಾದವು ಗಂಧರ್ವಗಾನದ ಹಾಗೆ ಕೇಳಿತು.

ಮಿತ್ರವಿಂದಕನು ಆ ನರಕವಾಸಿಯ ಸಮೀಪ ಹೋಗಿ, "ಅಯ್ಯಾ, ತಾವು ಬಹಳ ಕಾಲದಿಂದ ಆ ಪದ್ಮ ಕಿರೀಟ ಧರಿಸಿ ಇಲ್ಲಿಯ ರಾಜರಾಗಿರುವ ಹಾಗಿದೆ. ನನ್ನ ತಲೆಗೆ ಕೂಡಾ ಆ ಪದ್ಮ ಕಿರೀಟ ವನ್ನೂ ಶರೀರಕ್ಕೆ ಆಭರಣಗಳನ್ನೂ ಧರಿಸಲು ಕೊಡುವಿರಾ ?" ಎಂದು ಆಸೆಯಿಂದ ಕೇಳಿದನು.

"ಅಯ್ಯಾ, ಇದು ಪದ್ಮ ಕಿರೀಟವಲ್ಲ. ಅಸಿ ಧಾರಾ ಚಕ್ರ !" ಎಂದನು ನರಕವಾಸಿ.

"ಓಹೋ ! ನನಗೆ ಕೊಡಲು ಇಷ್ಟವಿಲ್ಲದೆ ಹೀಗೆ ಹೇಳುವಿರಿ !" ಎಂದನು ಮಿತ್ರವಿಂದಕ.

"ಹಾಗೇನು ? ಬಹುಶ: ಇಂದಿಗೆ ನನ್ನ ಪಾಪಕ್ಕೆ ಪರಿಹಾರವಾಯಿತೆಂದು ಕಾಣುತ್ತದೆ. ಇವನು ಕೂಡಾ ನನ್ನ ಹಾಗೆಯೇ ತಾಯಿಯನ್ನು ಹೊಡೆದವ ನಾಗಿರ ಬೇಕು." ಎಂದು ತನ್ನೊಳಗೇ ಅಂದುಕೊಂಡು ನರಕ ವಾಸಿ ತಲೆಯಲ್ಲಿದ್ದ ಅಸಿಧಾರಾಚಕ್ರವನ್ನು ತೆಗೆದು ಮಿತ್ರವಿಂದಕನ ತಲೆಯ ಮೇಲಿಟ್ಟು, ತನ್ನ ಶೃಂಖಲೆ ಗಳಿಂದ ಅವನನ್ನೂ ಬಂಧಿಸಿ, ತನ್ನ ದಾರಿ ಹಿಡಿದು ಹೋಗಿ ಬಿಟ್ಟನು.

ಸ್ವರ್ಗದಲ್ಲಿ ಇಂದ್ರನಾಗಿದ್ದ ಬೋಧಿಸತ್ವನು ದೇವ ಗಣಗಳನ್ನು ಕರೆದುಕೊಂಡು ನರಕಗಳನ್ನೆಲ್ಲಾ ತನಿಖೆ ಮಾಡುತ್ತ, ಹಾಗೆಯೇ ಮಿತ್ರವಿಂದಕನಿರುವ ಸ್ಥಳಕ್ಕೂ ಬಂದು ನೋಡಿದನು.

ಅವನನ್ನು ನೋಡಿ ಮಿತ್ರವಿಂದಕನು ಅಳುತ್ತ. "ಸ್ವಾಮೀ ! ನನ್ನನ್ನು ಕರುಣಿಸಿರಿ. ಈ ಶಿಕ್ಷೆಯಾದ ಚಕ್ರ ನನ್ನನ್ನು ಯಾವಾಗ ಬಿಡುತ್ತದೋ ತಿಳಿಯದು. ಇದರ ನೋವು ಸಹಿಸಲಾರೆ. ಬೇಕಂತ ಈ ಶಿಕ್ಷೆ ತಂದುಕೊಂಡೆನು" ಎಂದನು.

ಆಗ ಇಂದ್ರನು ಮಿತ್ರವಿಂದಕನಿಗೆ ಈ ವಿಧವಾಗಿ ಉತ್ತರಕೊಟ್ಟನು.

"ಹೌದು. ಇದು ನೀನಾಗಿಯೇ ಬರಮಾಡಿ ಕೊಂಡ ಕರ್ಮಫಲ. ಎಷ್ಟು ಹಣವಿದ್ದರೂ ಇನ್ನೂ ಬೇಕೆಂದು ಆಶೆ ಪಟ್ಟಿರುವಿ. ಪಿಶಾಚಿನಿಗಳೊಂದಿಗೆ ಕಾಲಕ್ಷೇಪ ಮಾಡಿರುವಿ. ಮಾನವರು ನಡೆಯ ತಕ್ಕ ಉನ್ನತ ಮಾರ್ಗಗಳಾವುದೂ ನಿನಗೆ ಹಿಡಿಸಲಿಲ್ಲ. ಹೆತ್ತತಾಯಿ ನಿನ್ನ ಹಿತ ಚಿಂತನೆಯಿಂದ ಹೇಳಿದ ಮಾತನ್ನೂ ಲಕ್ಷ್ಯ ಮಾಡಲಿಲ್ಲ. ಈ ಚಕ್ರವನ್ನು ನೀನಾಗಿ ಕೇಳಿ ಪಡೆದುಕೊಂಡಿರುವಿ. ತಾಯಿಗೆ ಹೊಡೆದವನ ಪಾಪಕ್ಕೆ ವಿಮೋಚನೆಯೇ ಇಲ್ಲ. ಫಲ ಅನುಭವಿಸಬೇಕಾದ್ದೇ. ನೀನು ಪಶ್ಚಾತ್ತಾಪದಿಂದ ಕರಗುತ್ತಾ ಇದ್ದರೆ ಮುಂದಿನ ಜನ್ಮದಲ್ಲಿ ಒಳಿತನ್ನು ಪಡೆಯುವಿ"

ಈ ಮಾತನ್ನು ಕೇಳಿ ನೋವಿನ ಬಾಧೆ ಸ್ವಲ್ಪ ಕಡಿಮೆಯಾದಂತೆ ಮಿತ್ರವಿಂದಕನ ಮನಸ್ಸಿಗೆ ತೋರಿತುಸು ಸಮಾಧಾನವಾಯಿತು.





# ರಾಣಾ ಪ್ರತಾಪ್

ಅಕ್ಬರ್ ತನ್ನ ಸ್ನೇಹಪೂರ್ವಕವಾದ ಯೋಜನೆಗಳ ಮೂಲಕ, ಮೇವಾರ್ ಯುವರಾಜನಾದ ರಾಣಾ ಪ್ರತಾಪನೊಬ್ಬನ ಹೊರತು, ಉಳಿದ ರಾಜಪುತ್ರ ರಾಜರೆಲ್ಲರನ್ನೂ ವಶಪಡಿಸಿಕೊಂಡನು. ಸ್ವತಂತ್ರ ಭಾವನೆಗಳು ತುಂಬಿದ, ವೀರ ಸಾಹಸಿಯಾದ ರಾಣಾ ಪ್ರತಾಪ್ ಮಾತ್ರ ಅಕ್ಬರನಿಗೆ ತಲೆ ಬಾಗಲಿಲ್ಲ. ಯಾವ ವಿಧದಿಂದಾದರೂ ಮೇವಾರವನ್ನು ವಶಪಡಿಸಿಕೊಳ್ಳಲೇಬೇಕೆಂದು ಅಕ್ಬರನು ಹಂಚಿಕೆ ಹಾಕಿಕೊಂಡೇ ಇದ್ದನು.

ಮೇವಾರದ ರಾಜಧಾನಿಯಾದ ಚಿತ್ತೋರಿನ ಮೇಲೆ ಅಕ್ಬರನು ಮೊದಲೇ ದಾಳಿ ಮಾಡಿದ್ದನು. ಆಗ ರಾಣಾ ಪ್ರತಾಪನ ತಂದೆ ರಾಣಾ ಉದಯ ಸಿಂಹನು ಕಾಡಿಗೆ ಓಡಿ ಹೋಗಿದ್ದನು. ಆದರೆ ಧೈರ್ಯಶಾಲಿಯಾದ ಜಯಮಲ್ಲ ಮತ್ತು ಪುನ್ನ ಎಂಬಿಬ್ಬರು ರಾಜಪುತ್ರ ಸೇನಾನಾಯಕರು ಕೋಟೆಗೆ ರಕ್ಷಕರಾಗಿ ನಿಂತು ಹೋರಾಡುತ್ತಿದ್ದುದರಿಂದ ಕೋಟೆಯನ್ನು ಹಿಡಿಯಲು ಅಕ್ಬರನಿಂದಾಗಲಿಲ್ಲ.





ಒಂದು ದಿನ ರಾತ್ರಿ ಅಕ್ಬರ್ ತನ್ನ ಸೈನಿಕ ಶಿಬಿರವನ್ನು ಸುತ್ತಿಕೊಂಡು ಬರುವಾಗ, ಗುಡ್ಡದ ಮೇಲಿನ ಕೋಟೆಯ ಗೋಡೆಯನ್ನು ಕೆಲವಂದಿ ರಾಜಪುತ್ರರು ದೀವಿಟಿಗೆಯ ಬೆಳಕಿನಿಂದ ಪರಿಶೀಲಿಸುವುದನ್ನು ನೋಡಿದನು. ಕೂಡಲೇ ಅಕ್ಬರನು ಪಕ್ಕದಲ್ಲಿದ್ದ ಸೈನಿಕನ ಕೈಯಿಂದ ತುಪಾಕಿಯನ್ನು ಎಳೆದುಕೊಂಡು ಆ ರಾಜಪುತ್ರ ವೀರರಲ್ಲಿ ಒಬ್ಬನನ್ನು ಸುಟ್ಟುಕೊಂದನು. ಹಾಗೆ ಅಕ್ಬರನ ತುಪಾಕಿ ಗುಂಡಿಗೆ ಬಲಿಯಾದವನು ಜಯಮಲ್ಲನೇ.



ಫುನ್ನಾ ಕೂಡಾ ಆದಕ್ಕೆ ಮೊದಲೇ ಸತ್ತು ಹೋಗಿದ್ದನು. ಆದುದರಿಂದ ಚಿತ್ತೋರು ಕೋಟೆ ಸುಲಭದಲ್ಲಿ ಅಕ್ಬರನ ವಶವಾಯಿತು. ಮರುದಿನ ಬೆಳಿಗ್ಗೆ ಎರಡು ಸಾವಿರ ಮಂದಿ ರಾಜಪುತ್ರ ಸೈನಿಕರು ಕೋಟೆಯೊಳಗಿನಿಂದ ಅಪೂರ್ವ ರೀತಿಯಲ್ಲಿ ತಪ್ಪಿಸಿಕೊಂಡರು. ಅವರು ಹೆಂಗಸರು ಮಕ್ಕಳ ಕೈಗಳನ್ನು ಬಂಧಿಸಿ ಎಳೆದುಕೊಂಡು ಅಕ್ಬರನ ಸೈನಿಕ ಶಿಬಿರಗಳ ಬದಿಯಿಂದಾಗಿಯೇ ಹೋದರು. ತಮ್ಮ ಸೈನಿಕರೇ ಖೈದಿಗಳನ್ನು ಕರೆದುಕೊಂಡು ಹೋಗುವರೆಂದು ಅಕ್ಬರನ ಸೈನಿಕರು ಮೋಸಹೋದರು.

ರಾಜಪುತ್ರ ವೀರರ ಧೈರ್ಯ ಸಾಹಸಗಳಿಗೆ ಮುಗ್ಧನಾದ ಅಕ್ಬರನು, ದಿಲ್ಲಿಗೆ ಹಿಂದಿರುಗಿದ ಮೇಲೆ, ಆ ವೀರರ ಸ್ಮೃತಿ ಚಿಹ್ನೆಯಾಗಿ ಕೋಟೆಯ ಇದಿರಿನಲ್ಲಿ ಜಯಮಲ್ಲನೂ, ಫುನ್ನವೂ ಕುದುರೆಯ ಮೇಲೆ ಸವಾರಿ ಮಾಡುವ ಹಾಗೆ, ಎರಡು ವಿಗ್ರಹಗಳನ್ನು ಪ್ರತಿಷ್ಠಿಸಿದನು.





ಚಿತ್ತೋರನ್ನು ಕಳೆದುಕೊಂಡರೂ ರಾಣಾ ಪ್ರತಾಪ್ ಮೊಗಲರನ್ನು ಇದಿರಿಸುವುದನ್ನು ಮಾತ್ರ ಬಿಡಲಿಲ್ಲ. ಕಡೆಗೆ ಸಹೋದರನಾದ ಶಕ್ತಿಸಿಂಹನೂ ಅಕ್ಬರನ ಪಕ್ಷ ಸೇರಿಬಿಟ್ಟನು. ಒಂದು ದಿನ ಪರ್ವತ ಶ್ರೇಣಿಗಳ ಪಕ್ಕದಲ್ಲಿ, ತನ್ನ ಚೇತಕ್ ಎಂಬ ಕುದುರೆಯ ಮೇಲೆ ರಾಣಾ ಪ್ರತಾಪ್ ಹೋಗುತ್ತಿರಲು, ಅಸಫ್ ಖಾನನ ನಾಯಕತ್ವದಲ್ಲಿ ಮೊಗಲ್ ಸೈನ್ಯವು ಅವನನ್ನು ಬೆಂಬತ್ತಿತು.



ತಪ್ಪಿಸಿಕೊಂಡು ಹೋಗುವಾಗ ರಾಣಾ ಪ್ರತಾಪನ ಚೇತಕ್ ಕುದುರೆಗೆ ದೊಡ್ಡ ಗಾಯವಾಯಿತು. ಮೊದಲೇ ದಣಿದಿದ್ದ ಕುದುರೆಯಾದರೂ ನಿಲ್ಲದೆ ವಾಯುವೇಗದಿಂದ ಓಡುತ್ತಿದ್ದಿತು. ಯಾರೋ ಕರೆಯುವ ಶಬ್ದ ಕೇಳಿ ರಾಣಾ ಪ್ರತಾಪ್ ಹಿಂದಿರುಗಿ ನೋಡಿದನು. "ಅಣ್ಣಾ, ನಿನ್ನ ಕುದುರೆ ಸಾಯುತ್ತದೆ. ನನ್ನ ಕುದುರೆ ತೆಗೆದುಕೋ" ಎಂದನು ಶಕ್ತಿಸಿಂಹ. ಆಗಲೇ ಚೇತಕ್ ಸತ್ತು ಬಿದ್ದುದರಿಂದ ರಾಣಾ ಪ್ರತಾಪ್ ತನ್ನ ಸೋದರನ ಕುದುರೆಯನ್ನೇರಿ, ಅಲ್ಲಿಂದ ತಪ್ಪಿಸಿಕೊಂಡು ಹೋಗಿಬಿಟ್ಟನು.

ರಾಣಾ ಪ್ರತಾಪ್ ತನ್ನ ರಾಣಿಯೊಂದಿಗೂ, ಮಕ್ಕಳೊಂದಿಗೂ ಅರಣ್ಯಗಳಲ್ಲಿ ಅಷ್ಟಕಷ್ಟಗಳನ್ನೂ ಅನುಭವಿಸಿದನು. ಒಂದು ಸಾರಿ ಶತ್ರುಗಳು ರಾಣಾನ ಕುಟುಂಬವನ್ನು ನಾಶ ಮಾಡಲಿಕ್ಕಾಗಿ ಪ್ರಯತ್ನಿಸಿದಾಗ, ಅಡವಿಯೊಳಗಿದ್ದ ಕೆಲವು ಮಂದಿ ಭಿಲ್ಲರು ರಾಣಾನ ಮಕ್ಕಳನ್ನು ತಮ್ಮ ಬುಟ್ಟಿಗಳಲ್ಲಿ ಬಚ್ಚಿಟ್ಟು ಅಪಾಯದಿಂದ ಪಾರುಗೊಳಿಸಿದರು.





ರಾಣಾ ಪ್ರತಾಪನ ಮಕ್ಕಳು ಕಾಯಿ, ಚಿಗುರುಗಳನ್ನು ತಿನ್ನುತ್ತ, ಮರದ ಬಳ್ಳಿಗಳಿಂದ ಕಟ್ಟಲ್ಪಟ್ಟ ಉಯ್ಯಾಲೆಯಲ್ಲಿ ನಿದ್ರಿಸುತ್ತ, ಕಾಲಕಳೆಯಬೇಕಾದ ಅಸಹನೀಯ ಪರಿಸ್ಥಿತಿಯುಂಟಾಯಿತು. ಆದರೂ ಸಹ ಶತ್ರುಗಳಿಗೆ ತಲೆ ಬಾಗಲಾರೆನೆಂದು ಪ್ರತಿಜ್ಞೆ ತೊಟ್ಟಿದ್ದ ಪ್ರತಾಪನು ಬಾಗಲೇ ಇಲ್ಲ.

ಒಂದು ದಿನ ರಾಣಾ ಪ್ರತಾಪನ ಮಗಳು ತಿನ್ನುತ್ತಿದ್ದ ಗೆಣಸನ್ನು ಕಾಡು ಬೆಕ್ಕು ಎಳೆದು ಕೊಂಡು ಓಡಿ ಹೋಯಿತು. ಹಸಿವಿನಿಂದ ಅಳುತ್ತಾ ಇದ್ದ ಮಗಳನ್ನು ನೋಡಿ ರಾಣಾ ಪ್ರತಾಪನ ಕಣ್ಣುಗಳಲ್ಲಿ ನೀರು ತುಂಬಿತು. ಈ ಸಂಘಟನೆಯ ಮೇಲೆ ರಾಣಾನಿಗೆ ಮೊಗಲರನ್ನು ಇದಿರಿಸಬೇಕೆಂಬ ಹಟ ಇನ್ನಷ್ಟು ಗಟ್ಟಿಯಾಯಿತೇ ಹೊರತು ಸಡಿಲಾಗಲಿಲ್ಲ !





ಅಸಮಾನವಾದ ಧೈರ್ಯ ಸಾಹಸಗಳಿಂದ ರಾಣಾ ಪ್ರತಾಪ್ ಹೋರಾಡಿದನು. ನೆಮ್ಮದಿಯಾಗಿ ಮೇವಾರ್ ಪರಗಣೆಯೊಳಗಿನ ಕೆಲವು ಪ್ರಾಂತ ಗಳನ್ನು ಮೊಗಲರಿಂದ ತನ್ನ ವಶಕ್ಕೆ ತಂದು ಕೊಂಡನು. ಅಂತೂ ಅಕ್ಬರನ ಅಧಿಕಾರಕ್ಕೆ ತಲೆ ಬಾಗದ ಏಕೈಕ ರಾಜಪುತ್ರನಾಗಿ ನಿಂತವನು ರಾಣಾ ಪ್ರತಾಪ್.

ರಾಜಪುತ್ರರ ವೀರ ಸಾಹಸಗಳಿಗೆ ಪ್ರತೀಕವಾಗಿ ಜೀವನವನ್ನು ಸಾಗಿಸಿದ ರಾಣಾ ಪ್ರತಾಪ್ ಭಾರತ ದೇಶದ ಚರಿತ್ರೆಯ ಮಹಾಪುರುಷರಲ್ಲಿ ಒಬ್ಬನಾಗಿದ್ದಾನೆ. ಬಲಿಷ್ಠರಾದ ಶತ್ರುಗಳಿಗೆ ಎದೆಯೊಡ್ಡಿ ಸ್ವತಂತ್ರ ಜೀವನ ಸಾಗಿಸಿದ ರಾಣಾ ಪ್ರತಾಪ್ ೧೫೯೭ ನೇ ವರ್ಷದಲ್ಲಿ ಅಮರ ನಾದನು.



# ನ್ಯಾಯದ ಕತ್ತರಿ

ಹಿಂದಿನ ಒಂದಾನೊಂದು ಕಾಲದಲ್ಲಿ ಕಳಿಂಗ ದೇಶಕ್ಕೆ "ನ್ಯಾಯದಾನದ ದೇಶ" ಎಂಬ ದೊಡ್ಡ ಖ್ಯಾತಿ ಇದ್ದಿತು. ಅದಕ್ಕೆ ಮುಖ್ಯ ಕಾರಣ ಅಲ್ಲಿಯ ರಾಜನೆಂದು ಹೇಳಲು ಸಾಧ್ಯವಿಲ್ಲ. ಆ ರಾಜ ಪರಂಪರೆಯಲ್ಲಿ ಬಂದ ನ್ಯಾಯದ ಕತ್ತರಿಯೇ. ನ್ಯಾಯ ನಿರ್ಣಯದಲ್ಲಿ ಅದೊಂದು ವಿಚಿತ್ರ ಸಾಧಕವಾಗಿ ಕೆಲಸ ಮಾಡುತ್ತಿತ್ತು. ಅದನ್ನು ಹಿಂದಿನ ರಾಜನಿಗೆ ಯಾವನೋ ಮಹಾತ್ಮನು ಕೊಟ್ಟಿದ್ದನಂತೆ.

ರಾಜ ವಂಶದವರು ಆ ಕತ್ತರಿಯನ್ನು ಅತ್ಯಮೂಲ್ಯವಾದ ಪರಮಪೂಜ್ಯ ವಸ್ತುವಿನಂತೆ ಗೌರವಿಸುತ್ತಾ ಕಾಪಾಡಿಕೊಂಡು ಬಂದಿದ್ದರು. ಆ ಕತ್ತರಿ ಒಂದಿಷ್ಟೂ ತಪ್ಪಿಲ್ಲದೆ, ಎಲ್ಲರೂ ಒಪ್ಪುವ ರೀತಿಯಲ್ಲಿ ನ್ಯಾಯದಾನ ಮಾಡುತ್ತಿದ್ದಿತು. ಈ ವರೆಗೂ ಕತ್ತರಿಯಿಂದಾದ ತೀರ್ಪಿಗೆ ಯಾರೂ ಆಕ್ಷೇಪಣೆ ಹೇಳಿರಲಿಲ್ಲ.

ಆ ನ್ಯಾಯದ ಕತ್ತರಿಯನ್ನು ರಾಜಭವನದ ಮುಂದಿನ ಮಂಟಪದಲ್ಲಿ ಎಲ್ಲರಿಗೂ ಕಾಣುವಂತೆ ನೇತಾಡಿಸಿಡಲಾಗಿತ್ತು. ವಾದಿ ಪ್ರತಿವಾದಿಗಳು ಯಾವ ನ್ಯಾಯಾಧಿಪತಿಯ ಬಳಿಗೂ ಹೋಗುವ ಅಗತ್ಯವಿಲ್ಲದಂತೆ, ನ್ಯಾಯ ವಿಚಾರಣೆಯೂ ನಿರ್ಣಯವೂ ಆ ಕತ್ತರಿಯ ಮುಂದೆಯೇ ನಡೆಯುತ್ತಿದ್ದುವು. ತೀರ್ಪೂ, ದಂಡನೆಯೂ ಒಂದೇ ಬಾರಿಗೆ ಆಗುತ್ತಿತ್ತು. ಅಪರಾಧ ಮಾಡಿದವನು ಅನುಭವಿಸುವ ದಂಡನೆ ಒಂದೇ ಬಗೆಯಾಗಿ ಭಯಂಕರವಾಗಿತ್ತು. ದಂಡನೆಯ ಕ್ಷಣದಲ್ಲಿ ಎಲ್ಲರೂ ಕಣ್ಣು ಮುಚ್ಚಿಬಿಡುತ್ತಿದ್ದರು. ದಂಡನೆ ಅನುಭವಿಸಿದವನು ಹಾ ಎಂದು ಕೂಗಿದ ಮೇಲೆಯೇ ಎಲ್ಲರೂ ಕಣ್ಣು ತೆರೆಯುವರು. ಅದು ಎಲ್ಲರನ್ನೂ ರೋಮಾಂಚನಗೊಳಿಸುವ ಶಿಕ್ಷೆ.

ವಾದಿ ಪ್ರತಿವಾದಿಗಳು ಆ ನ್ಯಾಯದ ಕತ್ತರಿಯ ಹತ್ತಿರ ಮಧ್ಯವರ್ತಿಗಳ ಸಮಕ್ಷಮದಲ್ಲಿ ನಿಲ್ಲುವರು. ಅವರ ಪಕ್ಷದವರು ಮಾತ್ರವಲ್ಲದೆ ಪರಿಣಾಮವನ್ನು ತಿಳಿಯುವ ಕುತೂಹಲದಲ್ಲಿ ಹೊರಗಿನ ಜನರೂ ಸುತ್ತಲೂ ಗುಂಪುಗೂಡಿ ನಿಲ್ಲುವರು. ಫಿರ್ಯಾದಿಯವನು ತನಗೆ ನಡೆದ ಅನ್ಯಾಯವನ್ನು ಹೇಳಿ, ತನ್ನ ಎರಡು ಕೈಗಳನ್ನೂ ಆ ಕತ್ತರಿಯ ನಡುವಿನಲ್ಲಿ ಇಡುವನು. ಹಾಗೆಯೇ ಎರಡನೇ ಪಕ್ಷದವನೂ ತಾನು ನಿರಪರಾಧಿ ಎಂಬುದನ್ನು ಹೇಳಿಕೊಂಡು ತನ್ನ ಕೈಗಳೆರಡನ್ನೂ ಆ ಕತ್ತರಿಯ ನಡುವಿನಲ್ಲಿ

ಸಿ. ಪದ್ಮರಾಜ



ಇಡುವನು. ಆ ಇಬ್ಬರಲ್ಲಿ ಯಾರು ಸುಳ್ಳು ಹೇಳಿದರೋ ಅವರ ಕೈಗಳನ್ನು ಆ ಕತ್ತರಿ, ಲಟ್ಟನೆ ಖಂಡಿಸಿಬಿಡುತ್ತದೆ. ಸತ್ಯ ಹೇಳಿದವರಿಗೆ ಏನೂ ಮಾಡುವುದಿಲ್ಲ.

ಒಂದು ಸಾರಿ, ವರಪ್ರಸಾದವಾಗಿ ರಾಜನಿಗೆ ಲಭಿಸಿದ ಆ ನ್ಯಾಯದ ಕತ್ತರಿಗೆ ಕೂಡಾ ನ್ಯಾಯ ನಿರ್ಣಯ ಮಾಡಲು ಸಾಧ್ಯವಾಗದಂತಹ ಸಮಸ್ಯೆಯೊಂದು ಬಂದುಬಿಟ್ಟಿತು. ಹೀಗೊಂದು ಸಮಸ್ಯೆಯ ಪರಿಸ್ಥಿತಿ ಬರುತ್ತದೆಂದು ಯಾರೂ ಊಹಿಸಿರಲಿಲ್ಲ. ಅಂತಹ ನ್ಯಾಯದ ಕತ್ತರಿಯನ್ನೇ ತಟಸ್ಥಗೊಳಿಸುವ ಸಮಸ್ಯೆಯು ವ್ಯವಹಾರವಾಗಿತ್ತು ಅದು.

ಸ್ನೇಹಿತರಾಗಿದ್ದ ಅಕ್ಕಪಕ್ಕದ ಇಬ್ಬರು ವರ್ತಕರ ಮಧ್ಯದಲ್ಲಿ ಒಂದು ತಕರಾರು ಬಂದಿತು. ಮೊದಲನೇ ವರ್ತಕನು ತಾನು ದೂರ ದೇಶಕ್ಕೆ ಹೋಗುವ ಮೊದಲು, ಎರಡನೆಯ ವರ್ತಕನ ಹತ್ತಿರ ನೂರು ಚಿನ್ನದ ಪವನುಗಳನ್ನು ಜಾಗರೂಕತೆಯಿಂದ ಇಟ್ಟುಕೊಳ್ಳಲು ಕೊಟ್ಟಿದ್ದನಂತೆ. ಹಿಂದಿರುಗಿ ಬಂದಮೇಲೆ ತನ್ನ ಪವನುಗಳನ್ನು ಕೇಳಿದಾಗ, "ನನ್ನ ಹತ್ತಿರ ಎಲ್ಲಿ ಕೊಟ್ಟಿರುವಿರಿ? ಯಾರೊಡನೆ ಕೊಟ್ಟಿರೋ ಏನೋ! ನನ್ನ ಹತ್ತಿರವಂತೂ ಕೊಡಲೇ ಇಲ್ಲ" ಎಂದನಂತೆ ಎರಡನೇ ವರ್ತಕ.

ನಾಲ್ಕು ಮಂದಿಯ ಮುಂದೆ ಈ ವಿಷಯ ತೆಗೆದಾಗ, "ಇವರು ದೂರ ದೇಶಕ್ಕೆ ಹೋದುದೋ ಬಂದುದೋ ನನಗೆ ತಿಳಿಯದು. ನಾನು ಇವರಿಂದ ನೂರು ಪವನುಗಳನ್ನು ಎಣಿಸಿ ಪಡೆಯಲೂ ಇಲ್ಲ. ಬೇಕಾದರೆ ಪ್ರಮಾಣ ಮಾಡಿ ಹೇಳುತ್ತೇನೆ. ಬೇರೆ ಯಾರಿಗಾದರೂ ಕೊಟ್ಟದ್ದನ್ನು ನಾನು ನೋಡಲೂ ಇಲ್ಲ. ನನ್ನ ಹತ್ತಿರ ಕೊಟ್ಟೆನೆನ್ನುವುದು ಮಾತ್ರ ಹಚ್ಚ ಹಸಿ ಸುಳ್ಳು!" ಎಂದು ಹೇಳಿದನು.

ಅವರಿಬ್ಬರ ಮಾತುಗಳಲ್ಲಿ ಯಾರದು ನಿಜ, ಯಾರದು ಸುಳ್ಳು ಎಂಬುದನ್ನು ಹೇಗೆ ತಿಳಿಯುವುದು? ಇಬ್ಬರೂ ತಮ್ಮ ತಮ್ಮ ನಂಬುಗೆಯ ದೇವರ ಮೇಲೂ, ತಮ್ಮ ಹೆಂಡತಿ ಮಕ್ಕಳ ಮೇಲೂ ಆಣೆ ಹಾಕಿ ಹೇಳುತ್ತಾರೆ. ತಮ್ಮ ಮಾತೇ ಸತ್ಯವೆಂದು ಪ್ರಮಾಣ ಮಾಡುತ್ತಾರೆ.

ಈ ತಕರಾರು ದೊಡ್ಡದಾಗಿ ಹತ್ತು ಮಂದಿ ಹಿರಿಯರು ಕೂಡಿದರು. ನಾಲ್ಕು ದಿನಗಳೊಳಗೆ ಒಂದು ರಾಜಿಯ ನಿರ್ಣಯಕ್ಕೆ ಬಾರದೆ ಹೋದರೆ, ರಾಜಭವನದ ನ್ಯಾಯದ ಕತ್ತರಿಯ ಮುಂದೆ ಹೋಗಬೇಕಾಗುತ್ತದೆಂದು ಆ ಇಬ್ಬರಿಗೂ ಊರ ಹಿರಿಯರು ಎಚ್ಚರಿಕೆ ಕೊಟ್ಟರು.

"ತನ್ನ ಹತ್ತಿರ ನೂರು ಪವನುಗಳನ್ನು ನಾನು ಕೊಡಲೇ ಇಲ್ಲವೆಂದು ಹಸಿಹಸೀ ಸುಳ್ಳು ಹೇಳುವವನೇ ಹೆದರಬೇಕಲ್ಲದೆ ನನಗೇನೂ ಆ ಕತ್ತರಿಯ ಭಯವಿಲ್ಲ. ಸುಳ್ಳು ಹೇಳಿ ನೂರು ಪವನುಗಳನ್ನು ಗುಳುಂಕರಿಸುವವನಿಗೇ ಭಯ. ದುರ್ಬುದ್ಧಿ ತೋರಿಸುವವನೇ ಅದರ ಫಲ ಅನುಭವಿಸುತ್ತಾನೆ. ನಾನಂತೂ ಅದಕ್ಕೆ ಸಿದ್ಧ" ಎಂದು ಮೊದಲ ವರ್ತಕನು ಒತ್ತಿ ಹೇಳಿದನು.



ಎರಡನೆಯ ವರ್ತಕನಿಗೆ ಕೂಡಾ ಆ ನ್ಯಾಯದ ಕತ್ತರಿಯ ಮಹತ್ವ ಗೊತ್ತೇ ಇದ್ದಿತು. ವಂಚಕರಿಗೂ ಅನ್ಯಾಯ ಮಾಡಿದವರಿಗೂ ಆ ಕತ್ತರಿ ಕೊಡುವ ಶಿಕ್ಷೆ ಏನೆಂಬುದನ್ನು ಅವನು ಅನೇಕ ಬಾರಿ ಕಣ್ಣು ಮುಂದೆ ನೋಡಿದ್ದನು. ಹಾಗಿದ್ದರೂ ಅವನು ಆ ನ್ಯಾಯದ ಕತ್ತರಿಯ ಮುಂದೆ ನಿಜ ಹೇಳುವೆನೆಂದು ಒಪ್ಪಿದುದನ್ನು ನೋಡಿ ಎಲ್ಲರಿಗೂ ಆಶ್ಚರ್ಯವಾಯಿತು. ಹಾಗಿದ್ದರೆ ವಾದಿಯಾಗಿದ್ದವನು ಸ್ವಪ್ನವನ್ನು ನಂಬುವವನೇನೋ ಅನಿಸಿತು ಎಲ್ಲರಿಗೂ.

ನಿರ್ಣಯಿಸಲ್ಪಟ್ಟ ದಿನ ಅವನೂ, ಮೊದಲನೇ ವರ್ತಕನೂ ನ್ಯಾಯ ಕತ್ತರಿಯ ಭವನಕ್ಕೆ ಹೋದರು. ಇಬ್ಬರೂ ರಾಜಭವನಕ್ಕೆ ಹೋಗುವವರಾದುದರಿಂದ ಒಳ್ಳೆಯ ವೇಷ ಭೂಷಣಗಳಿಂದಲೇ ಬಂದಿದ್ದರು. ಎರಡನೇ ವರ್ತಕನು ಚಿನ್ನದ ಹಿಡಿಕೆಯ ಕೈಕೋಲನ್ನು ಧರಿಸಿಕೊಂಡು ಬಂದಿದ್ದನು.

ಮಧ್ಯವರ್ತಿಗಳೂ, ಯಾವ ಪಕ್ಷಕ್ಕೆ ನ್ಯಾಯ ದೊರೆಯುವುದೆಂದು ನೋಡುವ ಕುತೂಹಲವುಳ್ಳವರೂ ಸೇರಿ, ರಾಜಭವನದ ಮುಂದೆ ಭಾರಿ ಜನರ ಗುಂಪುಗೂಡಿತ್ತು. ನ್ಯಾಯದ ಕತ್ತರಿ ತನ್ನ ಸ್ಥಾನದಲ್ಲಿ ಹೊಳೆಯುತ್ತ ನೇತಾಡಿ ಕೊಂಡಿತ್ತು.

ನೂರು ಪವನುಗಳನ್ನು ಕಳೆದುಕೊಂಡ ಮೊದಲನೆಯ ವರ್ತಕನು ಆ ಕತ್ತರಿಯ ಮಧ್ಯದಲ್ಲಿ ತನ್ನ ಕೈಗಳನ್ನಿಟ್ಟು, ತಾನು ಹೇಳುವುದು ಸತ್ಯವೆಂದು ಪ್ರಮಾಣಮಾಡಿ, ತನಗೆ ನಡೆದ ಅನ್ಯಾಯವನ್ನು, ದ್ರೋಹವನ್ನು, ವಂಚನೆಯನ್ನು ಕಣ್ಣೀರು ತುಂಬಿ ಕೊಂಡು ವಿವರಿಸಿದನು. ಮಧ್ಯವರ್ತಿಗಳೂ, ಇತರರೂ ಕಣ್ಣಿಗೆ ಕಣ್ಣಿಟ್ಟು ನೋಡಿಕೊಂಡೇ ಇದ್ದರು. ಕತ್ತರಿ ಕದಲದೆ ಇದ್ದ ಹಾಗೇ ಇದ್ದಿತು. ಹೆದರಿ ಕಣ್ಣು ಮುಚ್ಚಿದವರು ಮತ್ತೆ ಕಣ್ಣು ಬಿಡಿಸಿದರು.

ಒಂದು ನಿಮಿಷದ ಮೇಲೆ ಮೊದಲನೇ ವರ್ತಕನು ಮಧ್ಯವರ್ತಿಯ ಅನುಮತಿಯಿಂದ, ತನ್ನ ಕೈಗಳನ್ನು ಕತ್ತರಿಯ ಮಧ್ಯದಿಂದ ತೆಗೆದು, ಸ್ವಲ್ಪ ಹಿಂದೆ ಸರಿದು ನಿಂತನು. ಮಧ್ಯವರ್ತಿ ಎರಡನೇ ವರ್ತಕನಿಗೆ ಸನ್ನೆ ಮಾಡಿದನು. ಆಮೇಲೆ ಎರಡನೇ ವರ್ತಕನು ಕತ್ತರಿಯ ಹತ್ತಿರ ಬಂದು, ತನ್ನ ಕೈಯಲ್ಲಿದ್ದ ಕೈ ಕೋಲನ್ನು ಮೊದಲನೇ ವರ್ತಕನ ಕೈಗೆ ಕೊಟ್ಟು, ಕತ್ತರಿಯ ನಡುವಿನಲ್ಲಿ ತನ್ನ ಎರಡು ಕೈಗಳನ್ನೂ ಇಟ್ಟು, ತಾನು ಹೇಳುವುದು ಸತ್ಯವೆಂದು ಪ್ರಮಾಣ ಮಾಡಿ,

"ನಾನು ಈ ಮೊದಲು ಹೇಳಿದವರ ನೂರು ಪವನುಗಳನ್ನು ಇಟ್ಟು ಕೊಳ್ಳಲಿಲ್ಲ. ಯಾರದನ್ನೂ ಅಪಹರಿಸಲೂ ಇಲ್ಲ. ಅವರ ಪವನುಗಳು ನನ್ನ ಹತ್ತಿರ ಇಲ್ಲವೇ ಇಲ್ಲ. ಇದು ಸತ್ಯ" ಎಂದನು.

ಅವನ ಕೈಗಳು ತುಂಡಾಗುವುದನ್ನೇ ನಿರೀಕ್ಷಿಸಿ ಕಣ್ಣು ಮುಚ್ಚಿಕೊಂಡಿದ್ದವರಿಗೆ ಆಶ್ಚರ್ಯವಾಯಿತು. ಆ ಕತ್ತರಿ ಕದಲಲೇ ಇಲ್ಲ. ಇಬ್ಬರೂ ನಿರ್ದೋಷಿಗಳೆಂದು ಆ ಕತ್ತರಿ ಸೂಚಿಸುತ್ತಿದೆ. ಹಾಗಾದರೆ ಅಪರಾಧಿ ಯಾರು?

ಒಂದು ನಿಮಿಷದ ಮೇಲೆ ಮಧ್ಯವರ್ತಿಗಳ ಅನುಜ್ಞೆಯಿಂದ ಎರಡನೇ ವರ್ತಕನು ತನ್ನ ಕೈಗಳನ್ನು ಕತ್ತರಿಯ ನಡುವಿನಿಂದ ಹಿಂತೆಗೆದು ಮೊದಲನೇ ವರ್ತಕನ ಕೈಯಲ್ಲಿದ್ದ ತನ್ನ ಕೈಕೋಲನ್ನು ಪಡೆದು ಕೊಂಡು ತನ್ನ ಸ್ಥಾನಕ್ಕೆ ಹಿಂದಿರುಗಿದನು.

ಆ ದೇಶದಲ್ಲಿ ಅದುವರೆಗೂ ಹೀಗೆಂದೂ ನಡೆದಿರಲಿಲ್ಲ. ಜನರೆಲ್ಲಾ ಅರ್ಥವಾಗದ ಇಂದ್ರಜಾಲದ ವಿಚಿತ್ರವನ್ನು ನೋಡುವಂತೆ ಮಂತ್ರಮುಗ್ಧರಾಗಿ ನಿಂತಿದ್ದರು. ಮಧ್ಯವರ್ತಿಗಳು ಏನೂ ತೋರದೆ ಬೆರಗಾಗಿ ಬಿಟ್ಟರು. ನ್ಯಾಯ ನಿರ್ಣಯದಲ್ಲಿ ಖಂಡಿತವಾಗಿದ್ದ ಆ ಕತ್ತರಿ ತನ್ನ ಮಹತ್ವವನ್ನು ಕಳೆದು ಕೊಂಡಿತೇನೋ ಎಂದು ಅಲ್ಲಿ ನೆರೆದಿದ್ದವರ ಮನಸ್ಸಿನಲ್ಲಿ ಸಂದೇಹವುಂಟಾಯಿತು.

ಅಷ್ಟರಲ್ಲಿ ಮಧ್ಯವರ್ತಿಗಳ ಹಿರಿಯನೊಬ್ಬನಿಗೆ ಏನೋ ಹೊಳೆಯಿತು. ನ್ಯಾಯದ ಕತ್ತರಿಗೆ ಅಲುಗಾಡದಂತಹ ಪರಿಸ್ಥಿತಿ ಬರಬೇಕಾದರೆ ಎರಡನೇ ವರ್ತಕನ ವರ್ತನೆಯಲ್ಲಿ ನಡೆದ ಘಟನೆಯೇ ಕಾರಣವೆನಿಸಿತು. ಆ ವಕ್ರತೆಯನ್ನು ತತ್‌ಕ್ಷಣದಲ್ಲಿ ಸರಿಪಡಿಸದಿದ್ದರೆ ನ್ಯಾಯದ ಕತ್ತರಿಯ ಖ್ಯಾತಿಗೆ ಕಳಂಕವೇ ಸರಿ.

ಎರಡನೇ ವರ್ತಕನು ತನ್ನ ಕೆಲಸವಾಯಿತೆಂದು ಕೊಂಡು ತನ್ನ ಕೈಕೋಲಿನೊಂದಿಗೆ ಅಲ್ಲಿಂದ ಹೊರಡಲು ನಾಲ್ಕಡಿ ತೆಗೆಯುವಷ್ಟರಲ್ಲಿ, ಮಧ್ಯವರ್ತಿಗಳ ಹಿರಿಯನು ಅವನನ್ನು ಕರೆದನು.

"ನೀವು ಕೈ ಕೋಲಿನೊಂದಿಗೇ ಈ ಕತ್ತರಿಯ ಬಳಿಗೆ ಬಂದವರು ಕೈಕೋಲನ್ನು ಅವರ ಹತ್ತಿರ ಕೊಟ್ಟು, ಕತ್ತರಿಯ ನಡುವೆ ಕೈಯನ್ನಿಟ್ಟಿದ್ದೀರಿ. ನಿಮ್ಮ ಕೈ ಕೋಲಿನೊಂದಿಗೇ ಕೈಗಳನ್ನು ಕತ್ತರಿಯ ಮಧ್ಯದಲ್ಲಿಟ್ಟು, ಮೊದಲು ಹೇಳಿದ ಮಾತನ್ನು ಇನ್ನೊಮ್ಮೆ ಹೇಳಿರಿ" ಎಂದನು.

ಅದನ್ನು ಕೇಳಿ ಎರಡನೇ ವರ್ತಕನು ಬೆವತು ನಡುಗುತ್ತಿರಲು, ಮಧ್ಯವರ್ತಿ ಅವನ ಕೈಕೋಲನ್ನು ಕಸಿದುಕೊಂಡು, ಮಧ್ಯದಲ್ಲಿ ತಿರುಗಿಸಿ ಎಳೆಯಲು ಅದು ಎರಡಾಗಿ ಅದರೊಳಗಿನಿಂದ ನೂರು ಪವನುಗಳು ಕೆಳಗೆ ಬಿದ್ದುವು.

ಅದನ್ನು ನೋಡಿ ಎಲ್ಲರಿಗೂ ಆಶ್ಚರ್ಯವಾಯಿತು. ಮೊದಲನೇ ವರ್ತಕನ ಪವನುಗಳು ಅವನಿಗೆ ದೊರೆತವು. ರಾಜನು ಅನ್ಯಾಯದ ವರ್ತಕನಿಗೆ ಪ್ರತ್ಯೇಕ ಶಿಕ್ಷೆ ವಿಧಿಸಿದನು.

ಮಾನವನ ಬುದ್ಧಿ ನ್ಯಾಯದೇವತೆಯನ್ನೇ ಮೋಸಪಡಿಸುವುದೆಂದು ಗೊತ್ತಾದುದರಿಂದ, ರಾಜನು ಆ ಕತ್ತರಿಯನ್ನು ಹಳೆಯ ವಸ್ತುಗಳ ಪ್ರದರ್ಶನ ಶಾಲೆಗೆ ಕಳುಹಿಸಿ, ಪ್ರತ್ಯೇಕ ನ್ಯಾಯಾಸ್ಥಾನವನ್ನೂ ನ್ಯಾಯಾಧಿಪತಿಯನ್ನೂ ಏರ್ಪಡಿಸಿದನು.





# ಬರಿದೋ ಬರಿದು

ಒಂದಾನೊಂದು ಕಾಲದಲ್ಲಿ ಮಹಾನಗರವಾಗಿದ್ದ ಬಾಗ್ದಾದಿನಲ್ಲಿ ಬಹುದೊಡ್ಡ ಶ್ರೀಮಂತನಾದ ವೃದ್ಧನೊಬ್ಬನಿದ್ದನು. ಅವನಿಗೆ ನಗರದಲ್ಲಿ ರಾಜಭವನದಂತಹ ಒಂದು ಮನೆಯೂ, ಆವರಣದೊಳಗೆ ಮನೋರಮ್ಯವಾದ ಹೂದೋಟವೂ ಇದ್ದುವು, ಮನೆಯೊಳಗೆ ಅಲ್ಲಲ್ಲಿ ಮಖ್ಮಲ್ ಹಾಸಿದ ಆಸನಗಳನ್ನು ಒಪ್ಪ ಓರಣವಾಗಿ ಇರಿಸಲಾಗಿದ್ದುವು. ಮನೆ ತುಂಬಾ ಅನೇಕ ಮಂದಿ ನೌಕರರೂ, ಚಾಕರರೂ ಓಡಾಡಿಕೊಂಡಿದ್ದರು.

ಆದರೂ ಯಜಮಾನನಾದ ವೃದ್ಧನ ಮನಸ್ಸು ತುಂಬಾ ಕ್ರೂರಲೀಲಾಪ್ರಿಯವಾಗಿತ್ತು. ಬಡಬಗ್ಗರನ್ನೂ, ಭಿಕ್ಷುಕರನ್ನೂ ಮಾನಸಿಕವಾಗಿ ಪೀಡಿಸುವುದರಲ್ಲಿ ಅವನು ಸಂತೋಷಪಡುವನು.

ಒಂದು ದಿನ ಅವನು ಜಗಲಿಯಲ್ಲಿ ಮೆತ್ತೆಯ ಆಸನದಲ್ಲಿ ಕುಳಿತುಕೊಂಡಿದ್ದಾಗ, ಹೊಟ್ಟೆಗೆ ಗತಿ ಇಲ್ಲದ ನಿರ್ಭಾಗ್ಯದವನೊಬ್ಬನು, ಆ ವೃದ್ಧನ ಮುಂದೆ ಬಂದು ಬಗ್ಗಿ ಸಲಾಂ ಮಾಡಿದನು. ಆ ಬಡ ಮನುಷ್ಯನ ಹೆಸರು ಷಕ್ಕಾಕಿಕ್. ಅವನು ತನ್ನ ತಂದೆ ತೀರಿದಂದಿನಿಂದಲೂ ದಿಕ್ಕುದೆಸೆಯಿಲ್ಲದವನಾಗಿ ಬೀದಿ ಬೀದಿ ತಿರುಗಿ ಮುಷ್ಟಿ ಎತ್ತಿಕೊಳ್ಳುವವನಾಗಿದ್ದನು.

ಮುದುಕನು ಅವನ ಸಲಾಮಿಗೆ ತಲೆಯಾಡಿಸಿ, ಆಪ್ಯಾಯತೆಯಿಂದ ನೋಡುತ್ತ "ಯಾರಪ್ಪಾ, ಏನು ಸಹಾಯವಾಗಬೇಕು ನಿನಗೆ ? ಹೇಳಪ್ಪಾ" ಎಂದನು.

"ಅಯ್ಯಾ ! ತೀರ ಬಡವ. ಏನಾದರೂ ಇಷ್ಟು ಧರ್ಮ ಮಾಡಿಬಿಡಿ. ಎರಡು ದಿನಗಳಿಂದ ತಿಂಡಿಯ ಮುಖ ಕಂಡಿಲ್ಲ. ಹೊಟ್ಟೆ ಒಣಗಿಹೋಗಿದೆ ಅಯ್ಯಾ" ಎಂದನು ಷಕ್ಕಾಕಿಕ್.

ಮುದುಕನು ಉದ್ರೇಕದಿಂದ "ಅರೇ ಅಲ್ಲಾ ! ಏನಂದಿ ? ನಾನೊಬ್ಬ ಈ ನಗರದಲ್ಲಿ ಬದುಕಿರುವಾಗ ನಿನ್ನಂಥವನು ಹೊಟ್ಟೆಗಿಲ್ಲದೆ ಒಣಗುವುದೆಂದರೇನಿದು ? ಹಾಗಾಗಲು ಬಿಡಲಾರೆ. ನಾನೆಂದೂ ಸಹಿಸಲಾರೆ" ಎಂದನು.

"ಹತ್ತು ತಲಾಂತರದ ವರೆಗೆ ನಿಮ್ಮ ಮನೆ ತುಂಬಿಕೊಂಡಿರಬೇಕು. ಅಯ್ಯಾ, ಹಸಿವಿನ ಬಾಧೆ ವಿಪರೀತವಾಗಿದೆ" ಎಂದನು ಷಕ್ಕಾಕಿಕ್.

"ಇಕೋಪ್ಪಾ, ಈ ಹೊತ್ತಿನಲ್ಲಿ ನೀನು ಇಲ್ಲಿಯೇ ಇದ್ದು ನನ್ನೊಂದಿಗೆ ಊಟ ಮಾಡುವಿಯಂತೆ"

ಎಂದು ಮುದುಕನು ಒಬ್ಬ ನೌಕರ ಹುಡುಗನನ್ನು ಕರೆದು ಕೈ ತೊಳೆಯಲು ನೀರು ತಯಾರಿಸಲು ಹೇಳಿದನು. ಆಮೇಲೆ " ಹೂಂ, ಇಟ್ಟೆಯಾ? ಬಂದೆ " ಎನ್ನುತ್ತಾ, ಆಚೆ ಬದಿಗೆ ಹೋಗಿ, ಅಲ್ಲೇನೂ ಇಲ್ಲದ ಬರೀ ಜಾಗದಿಂದ ಕೂಜಾದ ನೀರನ್ನು ಬಗ್ಗಿಸಿ ತನ್ನ ಕೈಯನ್ನು ತೊಳೆದುಕೊಳ್ಳುವಂತೆ ನಟಿಸುತ್ತಾ, ಬಡವನ ಕಡೆಗೆ ತಿರುಗಿ "ಬಾರಪ್ಪಾ, ನೀನೂ ಕೈ ತೊಳೆದುಕೋ " ಎಂದನು, ತನ್ನ ಒದ್ದೆ ಕೈಗಳನ್ನು ಬಟ್ಟೆಯಿಂದ ಒರೆಸಿಕೊಳ್ಳುವಂತೆ ನಟಿಸುತ್ತಾ.

ಈ ನಟನೆಯ ತಲೆಬುಡವೇನೆಂದು ಷಕ್ಕಾಬಿಕ್ಕಿಗೆ ಅರ್ಥವಾಗಲಿಲ್ಲ. ಇದೇನೋ ಮುದುಕ ಯಜಮಾನರ ಹಾಸ್ಯಧೋರಣೆ ಎಂದುಕೊಂಡು, ಅವನೂ ಕೈ ತೊಳೆದುಕೊಳ್ಳುವ ಹಾಗೆಯೇ ನಟನೆ ತೋರಿಸಿದನು.

" ಎಲೋ ! ಮೇಜಿನ ಮೇಲೆ ಬಟ್ಟೆ ಹಾಸಿ ತಟ್ಟೆ ಗಿಟ್ಟೆ ಎಲ್ಲಾ ಇಟ್ಟು ಬೇಗನೇ ಬಡಿಸಿರಿ. ಪಾಪ, ಹೊಸ ಅತಿಥಿಯಾಗಿ ಬಂದ ಇವನು ತುಂಬಾ ಹಸಿವಿನಿಂದ ಇದ್ದಾನೆ " ಎಂದು ಮುದುಕನು ತನ್ನ ನೌಕರರಿಗೆ ಕೂಗಿ ಹೇಳಿದನು.

ಕೂಡಲೇ ಅನೇಕ ಮಂದಿ ನೌಕರರು ಗಡಿಬಿಡಿಯಿಂದ ಆಚೆಗೂ ಈಚೆಗೂ ಬರಿಗೈಗಳಿಂದ ಏನೇನೋ ತಂದಿಡುವಂತೆ ಓಡಾಡಿದರು. ಕೆಲವರು ಮೇಜಿಯ ಮೇಲೆ ಬಟ್ಟೆ ಹಾಸಿದಂತೆ ನಟಿಸಲು, ಕೆಲವರು ತಟ್ಟೆಗಳನ್ನು ಇಟ್ಟಂತೆ, ಕೆಲವರು ಪದಾರ್ಥಗಳನ್ನು ಬಡಿಸುವಂತೆ, ಪಾತ್ರೆಗಳನ್ನು ತಂದು ಬದಿಯಲ್ಲಿಡುವಂತೆ ನಟಿಸಿದರು.

ಷಕ್ಕಾ ಬಿಕ್ಕಿಗೆ ಹೊಟ್ಟೆಯೊಳಗೆ ಹಸಿವೆಯ ಬೆಂಕಿ ಭಗಭಗಿಸುತ್ತಿರಲು, ಈ ನಾಟಕವನ್ನು ನೋಡುತ್ತಾ ಸಹಿಸಿಕೊಂಡಿದ್ದನು. ಧನಿಕರ ಹಾಸ್ಯವರ್ತನೆಗಳನ್ನು ವಿಮರ್ಶಿಸುವುದರಿಂದ ಬಡವರಿಗೆ ಹಿತವಾಗಲಾರದೆಂದು ಅವನಿಗೆ ಗೊತ್ತಿತ್ತು. ಹೇಗೋ ತನ್ನ ಹೊಟ್ಟೆಗಿಷ್ಟು ಬಿದ್ದರೆ ಸಾಕೆಂದುಕೊಂಡನು.

" ಕುಳಿತುಕೋ ತಮ್ಮಾ, ಊಟ ಪ್ರಾರಂಭಿಸು. ಸಾವಧಾನವಾಗಿ ಊಟ ಮಾಡು " ಎಂದು



ಮುದುಕನು ಮೇಜಿಯ ಮುಂದೆ ಕುಳಿತು, ತನ್ನ ಮುಂದಿರುವ ಪದಾರ್ಥಗಳನ್ನು ಬೇರೆಬೇರೆಯಾಗಿ ರುಚಿನೋಡುವಂತೆ ಅಭಿನಯಿಸುತ್ತ, ದವಡೆಗಳನ್ನು ಆಡಿಸಲು ತೊಡಗಿದನು.

"ದಾಕ್ಷಿಣ್ಯ ಮಾಡಬೇಡಪ್ಪ. ನಿನಗೆ ಬೇಕಾದ್ದನ್ನು ಹಾಕಿಸಿಕೊಂಡು ನಿಧಾನವಾಗಿ ತಿನ್ನು. ಆಹ! ಈ ರೊಟ್ಟಿ ಬೆಳ್ಳಗಾಗಿ ಮೃದುವಾಗಿದೆ! ಇವನಿಗೆ ಇನ್ನೊಂದು ರೊಟ್ಟಿ ಹಾಕೋ!" ಎಂದು ಕೂಗಿ ಹೇಳಿದನು ಮುದುಕ.

"ಹೌದೌದು! ಇಂಥಾದ್ದೆಲ್ಲ ನಾನು ಈ ವರೆಗೂ ತಿನ್ನಲಿಲ್ಲ. ಇದರ ರುಚಿ ಅತ್ಯದ್ಭುತ!" ಎಂದು ಷಕ್ಕಾಷಿಕ್ ತಾನು ಕೂಡಾ ಏನೇನೋ ತಿನ್ನುವ ಹಾಗೆ ಅಭಿನಯಿಸಿದನು.

ಮುದುಕನು ಆ ರೊಟ್ಟಿಯನ್ನು ಮಾಡಿದ ನೀಗ್ರೊ, ಗುಲಾಮಳನ್ನು ಕುರಿತು, ಅವಳಿಗೆ ತಾನು ಕೊಡುವ ಇನಾಮುಗಳನ್ನು ಕುರಿತು ಹೇಳಿಕೊಂಡನು. ತಮ್ಮ ಇದಿರಿನಲ್ಲಿರುವ ಪಲ್ಯಗಳನ್ನೂ, ಭಕ್ಷ್ಯಗಳನ್ನೂ ವರ್ಣಿಸಿದನು. ಅವುಗಳ ರುಚಿ ಪರಿಮಳಗಳನ್ನು ಮೆಚ್ಚಿಕೊಂಡನು. ಆ ವರ್ಣನೆಗಳನ್ನು ಕೇಳುತ್ತಿದ್ದಂತೆ ಷಕ್ಕಾ ಷಿಕ್ಕಿಗೆ ಹಸಿವೆಯ ಬೆಂಕಿಗೆ ತುಪ್ಪ ಸುರಿದ ಹಾಗೆ ಆಗುತ್ತಿತ್ತು. ಇಷ್ಟಕ್ಕೂ ಅವರ ಮುಂದೆ ಖಾಲೀ ಮೇಜಿಯ ಹೊರತು ಬಟ್ಟೆಯೂ ತಟ್ಟೆಗಳೂ ಸಹಾ ಇಲ್ಲ. ಎಲ್ಲವೂ ಬರಿದೋ ಬರಿದು.

ಮಾಮೂಲು ಭೋಜನವಾದ ಮೇಲೆ ಮುದುಕನು ಹಲ್ವಾವನ್ನೂ, ಮಿಠಾಯಿಗಳನ್ನೂ ತಂದು ಬಡಿಸುವಂತೆ ಕೂಗಿದನು. ನೌಕರರು ಅವುಗಳನ್ನು ಕೂಡಾ ತಂದುಬಡಿಸಿದಂತೆ ಅಭಿನಯಿಸಿದರು.

ವೃದ್ಧನು ಹಿಂದಿನ ಹಾಗೆಯೇ ಅವುಗಳನ್ನು ವರ್ಣಿಸಿ ತಿನ್ನುವಂತೆ ನಟಿಸುತ್ತ, ಬಾಯಾಡಿಸುತ್ತ ತನ್ನ ಅತಿಥಿಗೂ ಒತ್ತಾಯ ಮಾಡಿದನು.

"ಅಯ್ಯಯ್ಯೋ! ಇನ್ನು ಇಂಥಾದ್ದೆಲ್ಲಾ ಹೊಟ್ಟೆಗೆ ಹಿಡಿಸಲಾರದಯ್ಯಾ" ಎಂದನು ಷಕ್ಕಾಷಿಕ್.

ಮುದುಕನು ಹಣ್ಣುಗಳನ್ನೂ, ಪಾನೀಯಗಳನ್ನೂ ತರಲಿಕ್ಕೆ ಹೇಳಿದನು.



ಬರಿದೋ ಬರಿದು ರೀತಿಯಲ್ಲಿ ಅವುಗಳೂ ಬಂದು ಮೇಜಿಯ ಮೇಲೆ ಅಲಂಕೃತವಾದುವು. ಅಷ್ಟರೊಳಗೆ ತಟ್ಟೆಗಳನ್ನೆಲ್ಲ ಎತ್ತಿಕೊಂಡು ಹೋದ ನಟನೆಗಳೂ ಮುಗಿಯಿತು.

"ಕುಡಿಯಪ್ಪಾ. ಇಂತಹ ಷರಬತ್ತು ಬೇರೆಲ್ಲಿಯೂ ಇಲ್ಲ. ಸಾರಾಯಿ ನೋಡಿದಿಯಾ? ಬಹಳ ಹಳೆಯದು ಬಹಳ ಚೆನ್ನಾಗಿರುತ್ತೆ. ಕುಡಿ ಕುಡಿ" ಎಂದು ಮುದುಕನು ತನ್ನ ಅತಿಥಿಗೆ ಪ್ರೋತ್ಸಾಹಿಸುತ್ತ, ಅವನ ಬಾಯಿಗೆ ಗ್ಲಾಸನ್ನು ತಾನೇ ಇಟ್ಟು ಕುಡಿಸುವಂತೆ ತೋರಿಸಿದನು.

ಅಷ್ಟು ಹೊತ್ತಿನವರೆಗೂ ಅವನಂತೆ ಮಾಡಲು ಪ್ರಯತ್ನಿಸುತ್ತಿದ್ದ ಷಕ್ಯಾಷಿಕ್ ಇನ್ನು ಸುಮ್ಮನಿರಲಾರದೆ ಹೋದನು. ಅವನು ರಭಸದಿಂದೆದ್ದು ಮುದುಕನ ತಲೆ ಬಗ್ಗಿಸಿ ಬೆನ್ನಿಗೊಂದು ದೊಡ್ಡ ಗುದ್ದನ್ನು ಹಾಕಿದನು. ಆ ಗುದ್ದಿನ ಶಬ್ದ ಮನೆಯೊಳಗೆಲ್ಲಾ ಮಾರ್ದನಿಗೊಟ್ಟಿತು.

ಮುದುಕನು ಕೋಪದಿಂದ "ಏನು ಮಾಡುವಿಯೋ ಚಾಂಡಾಲನೆ" ಎಂದು ಕೂಗಿದನು.

ಷಕ್ಯಾಷಿಕ್ ಶಾಂತನಾಗಿ "ಹಾ ! ಏನಾಯಿತು ? ಯಜಮಾನರೇ ! ನಾನು ನಿಮ್ಮ ಒಬ್ಬ ಗುಲಾಮ. ಆದರೆ ನೀವು ನನ್ನಿಂದ ಘಾಟಾದ ಪಾನೀಯ ಕುಡಿಸಿದಿರಿ. ಅದನ್ನು ನನಗೆ ಕುಡಿದು ಖುಷೀಯಾಗಿ ನಿಷಾ ಏರಿ, ಏನೇನೋ ಮಾಡುವಾ ಅಂತ ಕಾಣುತ್ತದೆ." ಎಂದನು ಷಕ್ಯಾಷಿಕ್.

ಆ ಮಾತುಕೇಳಿ ಯಜಮಾನನು ಬಿದ್ದು ಬಿದ್ದು ನಗುತ್ತ, "ಪರವಾಗಿಲ್ಲ ನೀನು ! ಸಿಡಿಲು ಬಡಿಸಿಬಿಟ್ಟೆ ! ಒಬ್ಬನು ಕೂಡಾ ನೀನು ತೋರಿಸಿದಷ್ಟು ಸಹನೆ ತೋರಿಸಲಿಲ್ಲ. ಇಷ್ಟು ಹಸಿವೆಯಲ್ಲಿಯೂ ನಿನ್ನ ಹಾಸ್ಯ ರಸನೆ ಚೆನ್ನಾಗೇ ತೋರಿಸಿದಿ ! ನಿನ್ನನ್ನು ಬಿಡುತ್ತೇನೆಂದು ಕೊಂಡೆಯಾ ? ಕೂಡು, ಕೂಡು. ನಿಜವಾದ ಹೊಟ್ಟೆ ತುಂಬುವ ಔತಣ ಈಗ ಬರುತ್ತೆ ನೋಡು !" ಎಂದನು.

ಮುದುಕನ ಕಣ್ಣು ಸನ್ನೆಯಾದುದೇ ತಡ, ನಿಜವಾದ ಊಟದ ಪದಾರ್ಥಗಳು ಬಂದುವು. ಈ ಮೊದಲು ಮುದುಕನು ಯಾವಯಾವ ಭಕ್ಷ್ಯ ಭೋಜ್ಯಗಳನ್ನು ಕುರಿತು ವರ್ಣಿಸಿದನೋ, ಅವೆಲ್ಲವನ್ನೂ ಈಗ ಪ್ರತ್ಯೇಕವಾಗಿ ತಿಂದು ಆನಂದಗೊಂಡನು ಷಕ್ಯಾಷಿಕ್. ಹೊಟ್ಟೆ ತುಂಬಿ ತೇಗಿದನು.

ಅಂದಿನಿಂದ ಷಕ್ಯಾಷಿಕ್ ಹೊಟ್ಟೆಗಿಲ್ಲದ ಬಡವನಾಗಿ ತಿರುಗಲೇ ಇಲ್ಲ. ಏಕೆಂದರೆ ಅವನು ಬದುಕಿರುವವಷ್ಟರ ವರೆಗೂ ಆ ಶ್ರೀಮಂತ ಮುದುಕನೇ ಅವನನ್ನು ದಿನಾ ಎರಡು ಹೊತ್ತೂ ತನ್ನ ಜತೆಯಲ್ಲೇ ಕುಳ್ಳಿರಿಸಿಕೊಂಡು ಊಟಮಾಡಿಸುತ್ತಿದ್ದನು.





# ಭಯಂಕರಮಾನವ

ಹಿಂದೆ ಬಹುದೊಡ್ಡ ಅರಣ್ಯವಿದ್ದಿತು. ಆ ಅರಣ್ಯದಲ್ಲಿ ಅನೇಕ ಬಗೆಯ ಮೃಗಗಳೂ, ಪಕ್ಷಿಗಳೂ ಸ್ವೇಚ್ಛೆಯಾಗಿ, ಸಂತೋಷವಾಗಿ ಜೀವನ ನಡೆಸಿಕೊಂಡಿದ್ದುವು. ಸಿಂಹರಾಜನು ಅರಣ್ಯವನ್ನು ಬಹು ಚೆನ್ನಾಗಿ ಪಾಲಿಸಿಕೊಂಡಿದ್ದನು.

ಒಂದುಸಾರಿ ಮನುಷ್ಯರ ವಿಷಯವನ್ನು ಕುರಿತು, ಕಾಗೆಯೊಂದು ಬಾತು ಕೋಳಿಯೊಂದಿಗೆ ಸ್ವಲ್ಪ ಸಂಗತಿ ಮಾತ್ರ ಹೇಳಿತ್ತು. "ಮನುಷ್ಯ ಎಂಬುದು ನಮ್ಮ ಹಾಗೆ ಪ್ರಾಣಿಯೇ ಆದರೂ ನಮ್ಮ ಹಾಗಿಲ್ಲ. ಬಟ್ಟೆ ಅಂತ ಬೇರೊಂದು ಮೈ ಬೇರೆ ಬೇರೆಯಾಗಿರುತ್ತವೆ. ಹಾಗೆಯೇ ಬೇರೆಬೇರೆ ಭಯಂಕರದವು" ಎಂದು ತನಗೆ ಗೊತ್ತಿದ್ದಷ್ಟು ಕಾಗೆ ಹೇಳಿತ್ತು.

ಹೀಗಿರುವಾಗ ಒಂದು ದಿನ ಬಾತು ಕೋಳಿ ನಿದ್ದೆಯಲ್ಲಿರುವಾಗ ಕನಸಿನಲ್ಲಿ ಮನುಷ್ಯ ಅದರ ಹತ್ತಿರ ಬಂದು, ಪ್ರೀತಿಯಿಂದ ಲಾಲಿಸಿ ಹತ್ತಿರ ಹತ್ತಿರ ಬಂದನು. ಆಗ ಯಾರೋ ಬಾತು ಕೋಳಿಯ ಕಿವಿಯಲ್ಲಿ ಗಟ್ಟಿಯಾಗಿ, "ಆ ಮಾನವ ಮೃಗದ ತಂಟೆಗೆ ಹೋಗಬೇಡ. ಅದು ಎಲ್ಲಾ ಮೃಗಗಳಿಗಿಂತಲೂ ಕ್ರೂರವಾದ ಮೃಗ" ಎಂದು ಕೂಗಿದಂತಾಯಿತು. ಬಾತು ಕೋಳಿ ಗಾಬರಿಯಿಂದೆದ್ದು, ದಿಕ್ಕು ತಿಳಿಯದೆ ಅರಣ್ಯದಲ್ಲಿ ಓಡ ತೊಡಗಿತು.

ಓಡುತ್ತಾ ಸಿಂಹರಾಜನ ಗುಹೆಯ ಮುಂದೆಯೇ ಬಂದಿತು. ಗುಹೆಯ ಹೊರಗೆ ಯುವರಾಜ ಸಿಂಹ ಕುಮಾರನು ನಿಂತಿದ್ದನು. ಅವನನ್ನು ತಂದೆ ತಾಯಿಗಳು ಗುಹೆಯ ಪರಾರ ದಾಟಿ ಎಲ್ಲಿಗೂ ಹೋಗಲು ಬಿಡುತ್ತಿರಲಿಲ್ಲ. ಆದುದರಿಂದ ಯುವರಾಜ ಸಿಂಹಕ್ಕೆ ಪ್ರಪಂಚಜ್ಞಾನವಿರಲಿಲ್ಲ.

ಒಂದು ಪಕ್ಷಿ ಗಾಬರಿಯಾಗಿ ಓಡಿ ಬರುವುದನ್ನು ನೋಡಿ ಯುವರಾಜ ಸಿಂಹವು, "ಏ ಪಕ್ಷೀ ? ಯಾರು ನೀನು ? ಯಾವ ಜಾತಿ ನಿನ್ನದು ? ಏಕೆ ಹೀಗೆ ಗಾಬರಿಯಾಗಿ ಓಡುತ್ತೀ ? ಏನಾಯಿತು ?" ಎಂದು ಕೇಳಿತು.

"ಮಹಾ ರಾಜಾ, ನಾನು ಬಾತು ಕೋಳಿ ಜಾತಿಯ ಪಕ್ಷಿ. ನಾನು ಕನಸಿನಲ್ಲಿ ಮಾನವ ಪ್ರಾಣಿಯನ್ನು ನೋಡಿ, ಅದು ಬಹಳ ಭಯಂಕರವಾದ ಮೃಗವೆಂಬ ಮಾತು ಕೇಳಿ ಹೆದರಿ ಓಡಿ ಹೋಗುತ್ತಾ ಇದ್ದೇನೆ. ಈ ಕಾಡಿಗೆ ಮಾನವ ಮೃಗ ಬಂದಿರಲೇಬೇಕು" ಎಂದಿತು ಬಾತು ಕೋಳಿ.

ವೈ. ಎಸ್. ಸುಂದರ



"ಹುಚ್ಚು ನಿನಗೆ! ಮೃಗರಾಜನಾಗಿ ನಾನು ಈ ಕಾಡಿನಲ್ಲಿರುವಾಗ ನಿನಗೆ ಯಾವ ಭಯವೂ ಬೇಡ. ಆ ಮಾನವವನ್ನು ಸೀಳಿ ಚೆಂಡಾಡಿ ಬಿಡುತ್ತೇನೆ. ಹಿಂದೆ ನನಗೆ ಕೂಡಾ ಇಂತಹದೇ ಕನಸು. ಒಂದು ಮಾನವ ಮೃಗ, ಭಯಂಕರ ಎಂದು ಯಾರೋ ಎಚ್ಚರಿಸಿದ್ದರು. ಆದರೆ ನನಗೆ ಏನೂ ಆಗಲಿಲ್ಲ. ನನ್ನ ಬಳಿಗೆ ಸುಳಿಯಲೇ ಇಲ್ಲ ಮಾನವಮೃಗ!" ಎಂದು ಯುವರಾಜ ಸಿಂಹ, ಬಾತು ಕೋಳಿ ಬಂದ ದಿಕ್ಕಿಗೇ ವೇಗವಾಗಿ ಹೋಗ ತೊಡಗಿತು. ಬಾತು ಕೋಳಿ ಕೂಡಾ ಸಿಂಹವು ಹೋಗುವ ಕಡೆಗೇ ಅನುಸರಿಸರಿಸಿಕೊಂಡು ಹೋಯಿತು.

ಹೀಗೆ ಆವೆರಡೂ ಸ್ವಲ್ಪದೂರ ಹೋಗುವಾಗ ದೂರದಲ್ಲಿ ಧೂಳೇಳುವುದು ಕಂಡಿತು. "ಆಗೋ! ಮಾನವ ಮೃಗ ಬರುವ ಹಾಗಿದೆ. ನೀನು ಅಡಗಿರು. ನಾನು ಅದರ ಕತೆ ಮುಗಿಸುತ್ತೇನೆ" ಎಂದಿತು ಸಿಂಹ. ಆದರೆ ತೀರಾ ಹತ್ತಿರ ಬಂದಾಗ ಓಡಿ ಬರುತ್ತಿದ್ದುದು ಒಂದು ಕತ್ತೆ. "ಯಾರು ನೀನು? ಯಾವ ಜಾತಿ ನಿನ್ನದು? ಏಕೆ ಹೀಗೆ ಗಾಬರಿಯಿಂದ ಓಡುತ್ತಿರುವಿ?" ಎಂದು ಸಿಂಹವು ಆ ಕತ್ತೆಯನ್ನು ಕೇಳಿತು.

"ಮಹಾರಾಜಾ! ನಾನು ಕತ್ತೆ. ನನ್ನದು ಗಾರ್ದಭ ಜಾತಿ. ಮಾನವಜಾತಿಯ ಹತ್ತಿರ ಇದ್ದೆ. ಅದು ನನ್ನನ್ನು ಹೇಗೆಹೇಗೆ ಹಿಂಸಿಸುತ್ತಾ ಇತ್ತೆಂಬುದನ್ನು ಊಹಿಸಲಿಕ್ಕೂ ಸಾಧ್ಯವಿಲ್ಲ. ಎಷ್ಟುಭಾರ ನನ್ನ ಬೆನ್ನ ಮೇಲೆ ಹೊರಿಸಿತಪ್ಪಾ! ಎಷ್ಟು ಪೆಟ್ಟು ತಿಂದೆ! ನನ್ನ ಶಕ್ತಿ ಕಡಿಮೆಯಾದ ಹಾಗೆ ಮಾನವ ಪ್ರಾಣಿ ಕೊಡುವ ಪೆಟ್ಟು ಇನ್ನೂ ಹೆಚ್ಚು. ನನ್ನ ಹೊಟ್ಟೆಗೆ ಅದು ಕೊಟ್ಟರೆ ಉಂಟು, ಇಲ್ಲದಿದ್ದರಿಲ್ಲ. ಇನ್ನೂ ಅಲ್ಲಿದ್ದರೆ ಅದು ನನ್ನನ್ನು ಕೊಲ್ಲುತ್ತದೆ. ಆದಕ್ಕೇ ತಪ್ಪಿಸಿಕೊಂಡು ಬಂದೆ" ಎಂದಿತು ಕತ್ತೆ.

"ಇಲ್ಲಿ ನಿನಗೇನೂ ಭಯವಿಲ್ಲ. ಮೃಗರಾಜನಾಗಿ ನಾನಿರುವಾಗ ಯಾರೂ ನಿನ್ನನ್ನು ಕೊಲ್ಲಲಾರರು. ಬರಲಿ ಆ ಮಾನವ ಇಲ್ಲಿಗೆ! ಅದನ್ನು ನಾನು ಹೇಗೆ ಕೊಲ್ಲುವೆನೋ ನೋಡು!" ಎಂದಿತು ಸಿಂಹ.

"ಕ್ಷಮಿಸಿ ಮಹಾರಾಜಾ! ಅದು ನನ್ನನ್ನು ಹುಡುಕಿಕೊಂಡು ಬಂದೀತು. ಆದರ ಕಣ್ಣಿಗೆ ಬೀಳುವಷ್ಟು ಧೈರ್ಯ ನನಗಿಲ್ಲ" ಎಂದು ಹೇಳಿ ಕತ್ತೆ ಓಡಿಹೋಯಿತು. ಬಾತು ಕೋಳಿಯೂ ಕತ್ತೆಯ ಹಿಂದೆಯೇ ಓಡಿತು.

ಮತ್ತೆ ದೂರದಲ್ಲಿ ಧೂಳೇಳುವುದು ಕಂಡಿತು. ಈಸಾರಿ ಒಂದು ಕುದುರೆ ನೊರೆಕಕ್ಕುತ್ತ ಓಡಿಬಂತು. ಯುವರಾಜ ಸಿಂಹ ಅದನ್ನು ನಿಲ್ಲಿಸಿ ಅದರ ಹೆಸರು, ಜಾತಿ ಓಡುವ ಕಾರಣ ಕೇಳಿತು.

"ಮಾನವ ಪ್ರಾಣಿ ಕೊಡುವ ಹಿಂಸೆಗಳಿಗೆ ಹೆದರಿಯೇ ತಪ್ಪಿಸಿಕೊಂಡು ಓಡುತ್ತಿದ್ದೇನೆ" ಎಂದಿತು ಕುದುರೆ ತೇಕುತ್ತಾ.

"ಇಷ್ಟು ದೊಡ್ಡ ಪ್ರಾಣಿಯಾದ ನೀನು, ಇಷ್ಟೊಂದು ಬಲಿಷ್ಠನಾಗಿದ್ದೂ ಮಾನವ ಪ್ರಾಣಿಗೆ

ಹೆದರುವುದೆಂದರೇನು ? ನಿನಗಿಂತ ಮಾನವವು ಬಲಿಷ್ಠವೇನು ?" ಎಂದು ಕೇಳಿತು ಸಿಂಹ.

"ಅಲ್ಲದೆ ಮತ್ತೇನು ಮಹಾರಾಜಾ ! ಅದು ಬಹಳ ಕ್ರೂರ, ಉಪಾಯದ್ದು ! ನನ್ನಿಂದ ಇಷ್ಟು ಕಾಲ ನಾನಾ ಚಾಕರಿ ಮಾಡಿಸಿತು. ಬಾಯಿಗೆ ಕಡಿವಾಣ ಹಾಕಿತು. ಚಬುಕಿನಿಂದ ಹೊಡೆಯಿತು. ರಿಕಾಬಿನಿಂದ ಪಕ್ಕೆಗಳಿಗೆ ತಿವಿಯಿತು. ಬೆನ್ನ ಮೇಲೆ ಕೂತು ಎಲ್ಲೆಲ್ಲಿಗೋ ಸವಾರಿ ಮಾಡಿತು. ಈಗ ನಾನು ಮುದಿಯಾದೆನೆಂದು ಕೊಲ್ಲಿಸಿ ನನ್ನ ಚರ್ಮ ವಶಪಡಿಸಿ ಕೊಳ್ಳಲು ನೋಡುತ್ತದೆ ! ಅದಕ್ಕೇ ತಪ್ಪಿಸಿಕೊಂಡು ಬಂದೆ" ಎಂದಿತು ಕುದುರೆ. ಸಿಂಹ ಎಷ್ಟು ಧೈರ್ಯ ಹೇಳಿದರೂ ಕೇಳದೆ ಕುದುರೆ ಓಡಿಹೋಯಿತು.

ಆಮೇಲೆ ಒಂಟೆಯೊಂದು ಓಡುತ್ತಾ ಬಂತು. ಅದು ಕೂಡಾ ಮಾನವ ಪ್ರಾಣಿಗೆ ಹೆದರಿಯೇ ತಪ್ಪಿಸಿಕೊಂಡು ಓಡುವುದಂತೆ.

"ಏನೂ ಹೆದರಬೇಡ. ನಿಮ್ಮೆಲ್ಲರನ್ನೂ ಕಾಪಾಡುವ ಭಾರ ನನ್ನದು. ಒಂಟೇ, ಇನ್ನು ಓಡಿ ಹೋಗಬೇಡ. ಇಲ್ಲೇ ಇದ್ದು ನೋಡುತ್ತಾ ಇರು. ನಿನ್ನನ್ನು ಹಿಡಿಯಲು ಬರುವ ಮಾನವ ಜಂತುವನ್ನು ಹೇಗೆ ಕೊಲ್ಲುವೆನೆಂದು ನೋಡು" ಎಂದಿತು ಸಿಂಹ.

ಆದರೆ ಒಂಟೆ ಮೃಗರಾಜನಿಗೆ ಕ್ಷಮಾಪಣೆ ಹೇಳಿ ಕೊಂಡು ನಿಲ್ಲಲು ಧೈರ್ಯ ಸಾಲದೆ ಓಡಿಯೇ ಹೋಯಿತು. ಮಾನವ ಪ್ರಾಣಿಗೆ ಹೆದರಿ ಓಡುವ ಮೃಗಗಳಿಗೆ ತನ್ನ ಮೇಲೆ ಅಷ್ಟೊಂದು ವಿಶ್ವಾಸವಿಲ್ಲ ದಿರುವುದನ್ನು ನೋಡಿ, ಯುವರಾಜ ಸಿಂಹಕ್ಕೆ ಆಶ್ಚರ್ಯವಾಯಿತು.

ಮತ್ತೆ ಸ್ವಲ್ಪ ಹೊತ್ತಿಗೆ ಒಬ್ಬ ಮುದಿ ಮನುಷ್ಯ ತಲೆಯ ಮೇಲೆ ಏನೋ ಹೊರೆ ಹೊತ್ತುಕೊಂಡು ಆ ಕಡೆಗೆ ಬಂದನು. ಅವನ ತಲೆಯ ಹೆಡಿಗೆಯಲ್ಲಿ ಬಡಗಿ ಕೆಲಸಕ್ಕೆ ಬೇಕಾದ ಸಾಧನಗಳಿದ್ದುವು. ಮರದ ಹಲಗೆಗಳೂ ಕೋಲುಗಳೂ ಇದ್ದುವು. ಹೆಗಲಲ್ಲೊಂದು ಚೀಲವೂ ಇದ್ದಿತು. ಅವನು ತನ್ನನ್ನೇ ನೋಡುವ ಸಿಂಹವನ್ನು ನೋಡಿ, ಹೆಡಿಗೆಯ ಹೊರೆಯನ್ನೂ,



ಚೀಲವನ್ನೂ ಕೆಳಗಿಳಿಸಿ, ಸಿಂಹಕ್ಕೆ ಸಾಷ್ಟಾಂಗ ನಮಸ್ಕಾರ ಮಾಡಿ ಎದ್ದು ಕೈ ಜೋಡಿಸಿ, "ಜಯವಾಗಲಿ ಸಿಂಹರಾಜರಿಗೆ. ಸಾವಿರ ವರ್ಷ ಆಯುಷ್ಯವಿರಲಿ ನಿಮಗೆ!" ಎಂದನು.

ಶರೀರದಲ್ಲೆಲ್ಲಾ ನೆರಿಗೆಗಳು ಬಿದ್ದಿರುವ ಆ ಎರಡು ಕಾಲಿನ ವಿಚಿತ್ರ ಪ್ರಾಣಿಯನ್ನು ನೋಡಿ ಸಿಂಹವು ನಗುತ್ತ "ಯಾರು ನೀನು ? ಯಾವ ಜಾತಿ ? ನೀನು ಕೂಡಾ ಮಾನವ ಪ್ರಾಣಿಗೆ ಹೆದರಿಯೇ ಬರುತ್ತಿರುವಿಯಾ ?" ಎಂದು ಕೇಳಿತು.

"ಮಹಾರಾಜಾ, ನನ್ನದು ಬಡಗಿ ಜಾತಿ. ತಮ್ಮ ಮಂತ್ರಿಯಾದ ಚಿರತೆಗೆ ಮನೆ ಕಟ್ಟಿಕೊಡಬೇಕೆಂದು ಸಮಾಚಾರ ಬಂತು. ಅದಕ್ಕೇ ಹೊರಟಿದ್ದೇನೆ" ಎಂದನು ಮುದಿಬಡಗಿ.

"ಮೊದಲು ನನಗೆ ಮನೆ ಕಟ್ಟದೆ ಚಿರತೆಗೆ ಹೇಗೆ ಮನೆ ಕಟ್ಟುತ್ತೀ ? ಮೊದಲು ನನಗೆ ಮನೆ ಕಟ್ಟಿ ಮುಂದೆ ಕದಲು" ಎಂದಿತು ಸಿಂಹ.

"ಮೊದಲು ಚಿರತೆಗೆ ಮನೆ ಕಟ್ಟಿ ಕೊಟ್ಟು ಒರುತ್ತೇನೆ. ಆಮೇಲೆ ನಿಮಗೆ ತಕ್ಕ ದೊಡ್ಡ ಭವನ ಖಂಡಿತಾ ಕಟ್ಟಿ ಕೊಡುತ್ತೇನೆ. ದಯಮಾಡಿರಿ !" ಎಂದನು ಬಡಗಿ.

"ಲೋ ! ಬಡಗಿ ಜಾತಿ ಪ್ರಾಣೀ ! ನಾನು ಯಾರು ಗೊತ್ತೇ?" ಎಂದು ಸಿಂಹವು ತನ್ನ ಮುಂಗಾಲುಗಳ ಪಂಜಾ ಬಿಡಿಸಿ ಎತ್ತಿ ವಿಲಾಸವಾಗಿ ಆಡಿಸಿ ಬಡಗಿಯ ಎದೆಯನ್ನು ಮುಟ್ಟಿ ದೂಡಿತು. ಆ ಸಣ್ಣ ದೂಡಿಕೆಗೇ ಬಡಗಿ ಡಮ್ಮನೆ ಬಿದ್ದನು. ಹೆಡಿಗೆಯ ಮೇಲೆಯೇ ಬಿದ್ದುದರಿಂದ ಸಾಮಾನುಗಳೆಲ್ಲ ಚೆದರಿದುವು.

"ಅಪ್ಪಣೆ ! ಅಪ್ಪಣೆ! ನೀವು ಹೇಳಿದಂತೆಯೇ ಮಾಡುತ್ತೇನೆ" ಎಂದು ಬಡಗಿ ಸ್ವಲ್ಪ ಹೊತ್ತಿನೊಳಗೆ ಬಂದು ಬೋನನ್ನು ತಯಾರು ಮಾಡಿ, ಸಿಂಹವು ಒಳಗೆ ಹೋಗಲು ಅದಕ್ಕೊಂದು ಬಾಗಿಲನ್ನು ಕೂಡಾ ಇಟ್ಟನು.

"ಒಳಗೆ ಹೋಗಿ ನೋಡಿರಿ ಪ್ರಭೂ" ಎಂದನು ವಿನಯದಿಂದ ಬಡಗಿ.

ಸಿಂಹವು ಅದರೊಳಗೆ ಹೋದ ಕೂಡಲೇ ಬಡಗಿ, ಬೋನಿನ ಬಾಗಿಲನ್ನು ತಟ್ಟನೆ ಮುಚ್ಚಿ, ಸಿಂಹವನ್ನು ನಗರಕ್ಕೆ ತಳ್ಳಿಕೊಂಡು ಹೋಗಲು ತಯಾರಾದನು.

"ಏಯ್! ಬಡಗೀ ! ಏನಿದು ನಿನ್ನ ಕೆಲಸ ?" ಎಂದು ಸಿಂಹವು ಒಳಗಿನಿಂದ ಭೀಕರವಾಗಿ ಗರ್ಜಿಸಿ ಪಂಜಾ ಎತ್ತಿ ಕೇಳಿತು.

"ನಾನೇ ಮಾನವ ಪ್ರಾಣಿ. ನನ್ನನ್ನು ನೋಡಿ ನೀನು ಓಡಿ ಹೋಗಬೇಕಿತ್ತು ! ಇನ್ನು ನಮ್ಮ ನಡುವೆ ನಾವು ಹೇಳಿದ ಹಾಗೆ ಕೇಳುವುದೇ ನಿನ್ನ ಕೆಲಸ !" ಎಂದು ಬಡಗಿ ನೆಗಾಡಿದನು.






ವಾಮನಮೂರ್ತಿಗೆ ಪೂರ್ತಿ ದಾನದತ್ತನಾಗಿಹೋದ ಬಲಿಚಕ್ರವರ್ತಿ ಸುತಲ ಲೋಕದಲ್ಲಿ ಪಾತಾಳ ಸಾಮ್ರಾಟನಾಗಿ ಇರ ತೊಡಗಿದನು. ಪ್ರತಿದಿನವೂ ಅವನು ವಿಷ್ಣು ಪಾದಗಳನ್ನು ಪೂಜಿಸುತ್ತಿದ್ದನು. ದೇವತೆಗಳಿಗೆಲ್ಲಾ ಸ್ವಾತಂತ್ರ್ಯ ಬಂದಿತು. ದೇವೇಂದ್ರನಿಗೆ ಮತ್ತೆ ಸ್ವರ್ಗಾಧಿಪತ್ಯ ಲಭಿಸಿತು.

ವಿಷ್ಣು ವಾಮನಮೂರ್ತಿಯಾಗಿ ವೇತ್ರ ದಂಡವನ್ನು ಹಿಡಿದು ಸುತಲದಲ್ಲಿ ಬಲಿಯ ಅರಮನೆಯ ದ್ವಾರವನ್ನು ಕಾದುಕೊಂಡಿದ್ದನು. ಹಾಗಿರುವಾಗ ಒಂದುಸಾರಿ ದಿಗ್ವಿಜಯಕ್ಕೆ ಹೊರಟಿದ್ದ ರಾವಣನು, ಸುತಲವನ್ನು ಜಯಿಸಬೇಕೆಂದುಕೊಂಡು ಅಲ್ಲಿಗೆ ಹೋದನು. ದ್ವಾರ ಪ್ರದೇಶದಲ್ಲಿದ್ದ ಕುಳ್ಳ ಕಾವಲುಗಾರನನ್ನು ನೋಡಿ, ಲಕ್ಷ್ಯಮಾಡದೆ ರಾವಣನು ಒಳಗೆ ಪ್ರವೇಶಿಸಲಿರುವಾಗ, ವಾಮನಮೂರ್ತಿ ಮಹೋನ್ನತನಾಗಿ ಬೆಳೆದು, ಕಾಲಿನ ಉಂಗುಷ್ಠದಿಂದ ರಾವಣನನ್ನು ಚಿಮ್ಮಿಬಿಟ್ಟನು, ಆ ಬೀಸುವಿಕೆಯಲ್ಲಿ ಹಾರಿದ ರಾವಣನು ಲಂಕೆಯಲ್ಲಿ ಮೂರ್ಛೆ ಹೋಗಿ ಬಿದ್ದನು. ಆ ಮೇಲೆ ಅವನು ಎಂದೂ ಪಾತಾಳ ಲೋಕದ ಗೋಜಿಗೆ ಹೋಗಲಿಲ್ಲ.

ತಾನು ಸುಭಿಕ್ಷವಾಗಿರುವಂತೆ ಪಾಲಿಸಿಕೊಂಡಿದ್ದ ಭೂಮಿಯ ಮೇಲೆ, ಮಳೆ ಬೆಳೆಗಳು ಹೇಗಿವೆ ಎಂದು ನೋಡಲು ವರ್ಷಕ್ಕೆ ಒಂದು ದಿನ ಬಲಿ ಭೂಮಿಯ ಮೇಲೆ ಅದೃಶ್ಯ ರೂಪದಲ್ಲಿ ಬಂದು, ಸಸ್ಯಗಳಿಗೆ ಪುಷ್ಟಿಯನ್ನೂ, ಜೀರ್ಣ ಕಾರಕತ್ವವನ್ನೂ, ಬಲವರ್ಧಕಗಳನ್ನೂ ನೀಡುವನು. ಅವುಗಳಿಗೆ ಕ್ರಿಮಿಕೀಟಕಗಳ ಬಾಧೆ ಬಾರದಂತೆ ಕಾಪಾಡುವನು. ಅವನ ಆಗಮನವನ್ನು ಸ್ವಾಗತಿಸುವ ರೂಪದಲ್ಲಿ ದೀಪಾವಳಿ ಹಬ್ಬದ ಕಾರ್ಯಕ್ರಮಗಳು ನಡೆಯುತ್ತವೆ. ಬಲಿ ಪಾಡ್ಯವು ಬಲಿಯನ್ನು ಪೂಜಿಸುವ ದಿನವಾಗುತ್ತದೆ. ವಾಮನನ ತ್ರಿವಿಕ್ರಮಾವತಾರವನ್ನು ನೆನಪಿಗೆ ತರುವಂತೆ ಜನರು ಊರೊಳಗೆಲ್ಲಾ ಆಕಾಶ ದೀಪಗಳನ್ನು ಬೆಳಗಿಸುತ್ತಾರೆ.

ದಕ್ಷಿಣ ಮಹಾ ಸಮುದ್ರದಲ್ಲಿ ಬಲಿ ಚಕ್ರವರ್ತಿ ಭೂಮಿಯ ಮೇಲೆ ಬರುವ ದ್ವಾರವಾಗಿ ಒಂದು

## ೭. ದತ್ತಾತ್ರೇಯ ಚರಿತ್ರೆ



ದ್ವೀಪವು ಉಂಟಾಗುತ್ತದೆ. ಅದು ಬಲಿದ್ವೀಪವೆಂದು ಪ್ರಸಿದ್ಧವಾಗುತ್ತದೆ. ಹೀಗೆಯೇ ಕಾಲಕ್ರಮದಲ್ಲಿ ಬಲಿಚಕ್ರವರ್ತಿಯ ವಂಶದವರಾದ ಪಲ್ಲವ ಚಕ್ರವರ್ತಿಗಳು, ತಮ್ಮ ವಂಶಪುರುಷನ ಹೆಸರಿನಲ್ಲಿ ಮಹಾಬಲಿಪುರವನ್ನು ಶಿಲ್ಪವೈಭವಗಳಿಂದ ನಿರ್ಮಿಸುತ್ತಾರೆ. ಕಾಂಚೀಪುರದಲ್ಲಿ ಉನ್ನತವಾದ ವಾಮನನ ತ್ರಿವಿಕ್ರಮ ರೂಪಶಿಲ್ಪವನ್ನು ಸ್ಥಾಪಿಸುತ್ತಾರೆ. ಈ ರೀತಿಯಾಗಿ ಬಲಿ ಚಕ್ರವರ್ತಿಯ ಕೀರ್ತಿ ಚಿರಸ್ಥಾಯಿಯಾಗಿ ನಿಂತಿರುವಂತಾಗುತ್ತದೆ.

ಸೂತ ಪುರಾಣಿಕನು ಹೀಗೆ ಹೇಳುತ್ತ, ಬಲಿ ಚಕ್ರವರ್ತಿ ಆಳಿಕೊಂಡಿದ್ದಾಗ, ಅಡಗಿ ತಲೆ ತಗ್ಗಿಸಿಕೊಂಡಿದ್ದ ಕ್ಷತ್ರಿಯ ರಾ..ರು, ಬಲಿಯ ಅಧಿಕಾರ ಹೋದ ಮೇಲೆ, ತಲೆಯೆ..ತೊಡಗಿದುದನ್ನು ಹೇಳತೊಡಗಿದನು.

ಅಂತಹ ಕ್ಷತ್ರಿಯರಲ್ಲಿ ಹೆಚ್ಚು ಬಲಿಷ್ಠರಾದವರು ವಿಜೃಂಭಿಸತೊಡಗಿ ಬಲವಿರುವವನಿಗೇ ಭೂಮಿ ಎಂಬ ಸ್ಥಿತಿ ಮತ್ತೆ ಬಂತು. ರಾಜರ ನಿರಂಕುಶ ಪಾಲನೆಯಿಂದ ಪ್ರಜೆಗಳಿಗೆ ಕಷ್ಟ ಬಂತು.

ಆಗ ವಿಷ್ಣು ದಶಾವತಾರಗಳಲ್ಲಿ ಆರನೆಯದಾದ ಪರಶುರಾಮಾವತಾರವನ್ನೆತ್ತಿ ಕಾಡನ್ನು ಕಡಿದು ಹಾಕುವ ಹಾಗೆ, ಇಪ್ಪತ್ತೊಂದು ಸಾರಿ ಭೂಮಂಡಲವನ್ನು ತಿರುಗಿ, ತನ್ನ ಕೊಡಲಿಯಿಂದ ಕ್ಷತ್ರಿಯರನ್ನೆಲ್ಲಾ ಕಡಿಗಡಿದು ಹಾಕಿದನು. ಯಾವ ಕಾಲಕ್ಕೆ ಯಾವುದು ಅಗತ್ಯವೋ ಆಗ ಅದನ್ನು ಸಾಧಿಸಲು ಅವತರಿಸುವನೆಂಬುದನ್ನು ನಿರೂಪಿಸಿದನು ವಿಷ್ಣು.

ಆಗಿನ ಧರಾತಳವನ್ನಾಳುವ ರಾಜರುಗಳಲ್ಲೆಲ್ಲಾ ಹೆಸರಾದ ನಾಯಕನಾಗಿ, ಸಾಮ್ರಾಟನಾಗಿದ್ದವನು ಹೈಹಯ ಚಕ್ರವರ್ತಿ ಕಾರ್ತವೀರ್ಯಾರ್ಜುನನೇ. ಅವನು ವಿಷ್ಣುವಿನ ಸುದರ್ಶನ ಚಕ್ರದ ಅಂಶದಿಂದ ಹುಟ್ಟಿದ ಮಹಾ ಪ್ರತಾಪಿ.

ಹಾಗೇಕೆ ಹುಟ್ಟಿದನೆಂದರೆ, ಒಂದು ಸಮಯದಲ್ಲಿ ವಿಷ್ಣು ಯೋಗನಿದ್ರೆಯಲ್ಲಿದ್ದಾಗ, ಶಂಖಚಕ್ರಗಳು ತಮ್ಮೊಳಗೆ ಅದೂ ಇದೂ ಮಾತಾಡುತ್ತ ವಾದಕ್ಕೆ ಬಿದ್ದವು. "ನನ್ನನ್ನು ಯಾರೆಂದುಕೊಂಡಿ? ಸಹಸ್ರ ಕಿರಣನಾದ ಸೂರ್ಯನನ್ನು ವಿಶ್ವಕರ್ಮನು ಸಾಣೆ ಹಿಡಿಯುವಾಗ ಉದುರಿದ ರಜಸ್ ಕಣಗಳಿಂದ ನನ್ನನ್ನು ರೂಪಿಸಿದ್ದಾನೆ. ಸಾವಿರ ಕೋಣಗಳಿಂದ ಗಿರಿಗಿರಿ ತಿರುಗುತ್ತಿದ್ದ ಅನೇಕ ಮಂದಿ ರಾಕ್ಷಸರನ್ನು ಸಂಹರಿಸಿದವನು ನಾನು. ನನ್ನನ್ನು ಧರಿಸಿಕೊಂಡುದರಿಂದಲೇ ಈ ವಿಷ್ಣುವಿಗೆ ಚಕ್ರಿ ಎಂಬ ಹೆಸರು ಬಂದಿದೆ. ನಿನ್ನದೇನಿದೆ? ಬರೀ ಧ್ವನಿ ಎಬ್ಬಿಸುವುದರ ಹೊರತು ಮತ್ತೇನಾದೀತು ನಿನ್ನಿಂದ ?" ಎಂದು ಚಕ್ರವು ನುಡಿಯಿತು.

ಅದನ್ನು ಕೇಳಿ ಪಾಂಚಜನ್ಯ ಶಂಖವು "ಏನು ಗರ್ವ ನಿನಗೆ ಚಕ್ರಪುರುಷಾ ! ಗರ್ವಿಷ್ಠನಾದ ನೀನು ಭೂಮಿಯಲ್ಲಿ ಗರ್ವವೇ ಮೂರ್ತಿವಂತನಾದ ರಾಜನಾಗಿ ಹುಟ್ಟು. ವಿಷ್ಣು ಸಾಧಾರಣ ಮುನಿಕುಮಾರನಾಗಿ ಅವತರಿಸಿ, ಕಟ್ಟಿಗೆ ಕಡಿಯುವ ಕೊಡಲಿಯಿಂದ ನಿನ್ನ



ಗರ್ವ ಮುರಿಯುತ್ತಾನೆ " ಎಂದು ಶಾಪವಾಕ್ಯಗಳನ್ನು ಉಸುರಿತು. ಇದನ್ನು ಕೇಳಿ ವಿಷ್ಣುವೂ ತಲೆದೂಗಿದನು.

ಶಂಖದ ಶಾಪ ಪಡೆದ ಚಕ್ರಪುರುಷನು ಕಾರ್ತವೀರ್ಯಾರ್ಜುನನಾಗಿ ಹುಟ್ಟಿ ಹೈಹಯ ಸಾಮ್ರಾಜ್ಯವನ್ನು ನಾಲ್ಕು ದಿಕ್ಕುಗಳಿಗೂ ವಿಸ್ತರಿಸುವಂತೆ ಮಾಡಿದನು. ಅವನು ಭಗವಂತನ ಅವತಾರವಾದ ದತ್ತಾತ್ರೇಯನ ಮಹಾಭಕ್ತ. ದತ್ತಾತ್ರೇಯನ ಅನುಗ್ರಹದಿಂದ ಅಣಿಮಾದಿ ಅಷ್ಟಸಿದ್ಧಿಗಳನ್ನೂ, ಅನೇಕ ಶಕ್ತಿಗಳನ್ನೂ ಪಡೆದುಕೊಂಡವನು. ಅಗತ್ಯಬಿದ್ದಾಗ ಅನೇಕ ಆಯುಧಗಳೊಂದಿಗೆ ಸಾವಿರ ಕೈಗಳು ಅವನಿಗೆ ಬರುತ್ತಿದ್ದುವು... ಎಂದು ಸೂತ ಪುರಾಣಿಕ ಮುನಿ ಹೇಳುತ್ತಿರಲು ನೈಮಿಷಾರಣ್ಯದ ಮುನಿಗಳು " ಸೂತ ಮುನೀಂದ್ರಾ, ದತ್ತಾತ್ರೇಯನ ಅವತಾರ ಹೇಗಾಯಿತು ? ಆ ಚರಿತ್ರೆಯನ್ನು ಕೇಳುವ ಕುತೂಹಲದಲ್ಲಿದ್ದೇವೆ " ಎಂದು ಕೇಳಿಕೊಂಡರು.

ಸೂತನು ದತ್ತಾತ್ರೇಯನ ಕಥೆಯನ್ನು ಹೇಳತೊಡಗಿದನು.

ಒಂದು ಸಾರಿ ಅತ್ರಿ ಮಹರ್ಷಿ ತನಗೆ ಪುತ್ರನಾಗಬೇಕೆಂದು ಭಗವಂತನಾದ ಮಹಾವಿಷ್ಣುವನ್ನು ತ್ರಿಮೂರ್ತಿ ರೂಪದಲ್ಲಿ ನೆನೆಯುತ್ತ ತಪಸ್ಸು ಮಾಡಲು ಕುಳಿತನು. ಅವನಿಗೆ ಮೆಚ್ಚಿದ ವಿಷ್ಣು ತನ್ನ ಇರ್ಕೆಲಗಳಲ್ಲಿ ಬ್ರಹ್ಮ, ಮಹೇಶ್ವರರನ್ನೂ ಕೂಡಿಕೊಂಡು ಅವನ ಮುಂದೆ ಪ್ರತ್ಯಕ್ಷನಾಗಿ " ಅತ್ರಿ ಮಹರ್ಷೀ, ನಾನು ನಿನಗೆ ದತ್ತವಾಗಿರುವೆನು. ನಾವು ಮೂವರೂ ಒಂದೇ ಆದುದರಿಂದ ತ್ರಿಮೂರ್ತಿಗಳ ಅಂಶಗಳಿಂದ ನಿನಗೆ ಮಗನಾಗಿ ಜನಿಸುತ್ತೇನೆ. ದತ್ತಾತ್ರೇಯನೆಂದು ನನಗೆ ಹೆಸರು ಬರುವಂತಾಗಲಿ " ಎಂದನು. ಮರುಕ್ಷಣವೇ ತ್ರಿಮೂರ್ತಿಗಳೂ ಅಂತರ್ಧಾನವಾದರು.

ಅದೇ ಸಮಯದಲ್ಲಿ ನಾರದನು, ತ್ರಿಮೂರ್ತಿಗಳ ಅರ್ಧಾಂಗಿಗಳೆಂದು ಗರ್ವಿಸಿಕೊಂಡಿರುವ ಸರಸ್ವತಿ, ಲಕ್ಷ್ಮೀ, ಪಾರ್ವತಿಯರ ಮುಂದೆ ಅತ್ರಿ ಮಹಾ ಮುನಿಯ ಪತ್ನಿಯಾದ ಅನಸೂಯೆಯ ಪಾತಿವ್ರತ್ಯದ ಮಹಿಮೆಗೆ ಸಾಟಿಯಿಲ್ಲವೆಂದು ವಾದ ಮಾಡಿ ನಿರೂಪಿಸಿದನು. ತ್ರಿಮೂರ್ತಿಗಳ ಪತ್ನಿಯರಿಂದ ಸಾಧ್ಯವಾಗದ ಕೆಲಸಗಳನ್ನು ಅವಳು ಮಾಡಿರುವುದಾಗಿ ಹೇಳಿ ತೋರಿಸಿದನು.

ಅನಸೂಯೆ ಗಂಗೆಯನ್ನು ಪೀಡಿಸುತ್ತಿದ್ದ ಪಾಪ ಪಿಶಾಚಿಗಳನ್ನು ನಿರ್ಮೂಲಿಸಿದವಳು. ನಾರದನು ಕೊಟ್ಟ ಕಬ್ಬಿಣದ ಕಡಲೆಗಳನ್ನು ಬೇಯಿಸಿ ಬಡಿಸಿದವಳು. ಸೂರ್ಯನು ಉದಯಿಸದಂತೆ ಮಾಡಿದ ಸುಮತಿಯನ್ನು ಒಪ್ಪಿಸಿ, ಸೂರ್ಯೋದಯವಾದರೆ ಸತ್ತುಹೋದ ಅವಳ ಗಂಡನನ್ನು ಬದುಕಿಸಿ, ಲೋಕವನ್ನು ರಕ್ಷಿಸಿದ್ದಾಳೆ ಅನಸೂಯೆ.

ಇದನ್ನೆಲ್ಲ ಕೇಳಿ ತ್ರಿಮೂರ್ತಿಗಳ ಪತ್ನಿದೇವಿಯರಿಗೆ ಅನಸೂಯೆಯ ಮೇಲೆ ಅಸೂಯೆಯುಂಟಾಯಿತು. ತಮ್ಮ ಗಂಡಂದಿರು ಬಂದ ಕೂಡಲೇ ಅನಸೂಯೆಯ



ಪಾತಿವ್ರತ್ಯವನ್ನು ಭಗ್ನಗೊಳಿಸಿ ಬರಬೇಕೆಂದು ತಮ್ಮ ಗಂಡಂದಿರನ್ನು ಒತ್ತಾಯ ಮಾಡಿ ಕಳುಹಿಸಿದರು.

ಅದಕ್ಕಾಗಿ ಬ್ರಹ್ಮ, ವಿಷ್ಣು, ಮಹೇಶ್ವರರು ಯತೀಶ್ವರರ ವೇಷಗಳಿಂದ ಅತ್ರಿಯ ಆಶ್ರಮದ ಮುಂದೆ ಹೋಗಿ "ಭವತಿ ಭಿಕ್ಷಾಂ ದೇಹಿ" ಎಂದು ಕೂಗಿ ಹೇಳಿಕೊಂಡು ನಿಂತರು.

ಆಗ ಅತ್ರಿ ತಪಸ್ಸಿಗೆ ಹೋದವನು ಹಿಂದಿರುಗಿ ಬಂದಿರಲಿಲ್ಲ. ಆದುದರಿಂದ ಅತಿಥಿ ಸತ್ಕಾರ ಮೊದಲಾದ ಬಾಧ್ಯತೆಗಳೆಲ್ಲವೂ ಅನಸೂಯೆಯ ಮೇಲೆಯೇ ಇದ್ದಿತು. ಅನಸೂಯಾದೇವಿ ಹೊರಗೆ ಬಂದು ದೊಡ್ಡ ಯತಿಗಳ ರೂಪದಲ್ಲಿ ನಿಂತಿರುವ ತ್ರಿಮೂರ್ತಿಗಳನ್ನು ನೋಡಿದಳು. ವಿನಯ ವಿಧೇಯತೆಗಳಿಂದ ಅವರನ್ನು ಒಳಗೆ ಆಹ್ವಾನಿಸಿ, ಅರ್ಘ್ಯಪಾದ್ಯಗಳನ್ನಿತ್ತು, ಭೋಜನಕ್ಕೆ ಸಿದ್ಧರಾಗಬೇಕೆಂದು ಕೇಳಿಕೊಂಡಳು.

ಆಗ ಕಪಟ ಯತಿಗಳು ಮೂವರೂ ವಿಕಟ ಕಂಠದಿಂದ, "ಎಲೈ ಸಾಧ್ವೀ, ನಮಗೊಂದು ಬಿಡಲಾಗದ ವ್ರತವಿದೆ, ಅದನ್ನು ಹೇಳದೆ ಉಪಾಯವಿಲ್ಲ. ಸಾಧ್ಯವಾಗದಿದ್ದರೆ ಹೇಳಿಬಿಡು. ನಾವು ಕೋಪಿಸುವೆವೆಂದು ಮಾತ್ರ ತಿಳಿಯಬೇಡ. ನಮ್ಮ ವ್ರತವೇನೆಂದರೆ, ನೀನು ಜನಿಸಿದ ರೂಪದಲ್ಲಿ ಬಡಿಸಿದರೇನೇ ನಾವು ಭೋಜನ ಮಾಡುವುದು !" ಎಂದರು.

ಅದನ್ನು ಕೇಳಿ ಅನಸೂಯೆ, "ಹಾಗೆಯೇ ಆಗಲಿ, ಅದಕ್ಕೇನು?" ಎಂದು ಹೇಳಿ, ಅವರ ಮೇಲೆ ತನ್ನ ಪತಿಯನ್ನು ನೆನೆದು ತೀರ್ಥವನ್ನು ಪ್ರೋಕ್ಷಿಸಿದಳು. ಮರುಕ್ಷಣದಲ್ಲಿ ಮೂವರು ಯತಿಗಳೂ ಮುದ್ದು ಗುಲುಕುವ ಮೂರು ಸುಂದರ ಶಿಶುಗಳಾಗಿ ಹೋದರು.

ಅನಸೂಯೆಯಲ್ಲಿ ಮಾತೃತ್ವವು ಉಕ್ಕಿತು. ಅವಳು ಆ ಮಕ್ಕಳು ಕೋರಿಕೊಂಡಂತೆ ಹಾಲನ್ನವನ್ನು ಕಿವಿಚಿ, ಅವುಗಳನ್ನು ತನ್ನ ಮಡಿಲಲ್ಲಿಟ್ಟುಕೊಂಡು ತಿನ್ನಿಸಿದಳು. ಲಾಲಿಸಿ ಹಾಲೂಡಿದಳು. ತ್ರಿಮೂರ್ತಿಗಳು ಹಸುಮಗುಗಳಾಗಿ ಅನಸೂಯೆಯ ಮಡಿಲಲ್ಲಿ ಹಾಯಾಗಿ ನಿದ್ದೆ ಮಾಡಿದುವು.

ಅನಸೂಯೆ ಆ ಮೂರು ಮಕ್ಕಳನ್ನೂ ಬಟ್ಟೆಯ ತೊಟ್ಟಿಲಲ್ಲಿ ಮಲಗಿಸಿ ಜೋಗುಳ ಹಾಡಿದಳು. "ಮೂರು ಲೋಕಗಳನ್ನಾಳುವ ಮುಮ್ಮೂರ್ತಿಗಳೂ ನನ್ನ ಕಂದಗಳಾದರು. ಏನು ನನ್ನ ಅದೃಷ್ಟ! ಪತಿಯ ತಪಸ್ಸು ಸಾರ್ಥಕವಾಯಿತು. ಬ್ರಹ್ಮಾಂಡವೇ ಇವರಿಗೆ ಉಯ್ಯಾಲೆ. ನಾಲ್ಕು ವೇದಗಳೇ ತೊಟ್ಟಿಲ ಸಂಕೋಲೆಗಳು. ಓಂಕಾರ ಪ್ರಣವ ನಾದವೇ ಜೋಗುಳ ಹಾಡು!" ಎಂದು ಹಾಡುತ್ತಾ ತ್ರಿಮೂರ್ತಿಗಳನ್ನೂ ತೂಗಿದಳು ಅನಸೂಯೆ.

ಆಗ ಎಲ್ಲಿಂದಲೋ ಬಂದ ಬೆಳ್ಳಗಿನ ಎತ್ತು ಆಶ್ರಮ ದ್ವಾರದ ಹತ್ತಿರ ನಿಂತು ತಲೆಯಾಡಿಸುತ್ತಾ ಕೊರಳ ಮಣಿಗಂಟೆಗಳ ಕಿಣಿಕಿಣಿ ನಾದ ಹೊರಡಿಸಿತು.

ದೊಡ್ಡದೊಂದು ಗರುಡಪಕ್ಷಿ, ರೆಕ್ಕೆಗಳನ್ನು ಬೀಸುತ್ತಾ ಆಶ್ರಮದ ಸುತ್ತಲೂ ತಿರುಗ ತೊಡಗಿತು.



ರಾಜಹಂಸವೊಂದು ವಿಕಸಿತ ಪದ್ಮವನ್ನು ಕಚ್ಚಿಕೊಂಡು ಹಾರುತ್ತಾ ಬಂದು ಆಶ್ರಮದ ಬಾಗಿಲ ಮುಂದೆ ನೆಲಕ್ಕಿಳಿಯಿತು.

ಮುದ್ದುಗುಲುಕುವ ನಾಲ್ಕು ಬಣ್ಣಗಳ ನಾಯಿ ಮರಿಗಳು ಬಾಲವಾಡಿಸುತ್ತಾ ಆ ಮನೆಯೊಳಗೆ ಹೊಕ್ಕುವು. ಅವುಗಳಿಗೆ ಜತೆಯಾಗಿ ನಾಗರಹಾವೊಂದು ಹೆಡೆಯೆತ್ತಿ ಆಡಿಸುತ್ತಾ ಬಂದಿತು.

ಅಷ್ಟರಲ್ಲಿ ಮಹತೀ ವೀಣೆಯನ್ನು ಝೇಂಕರಿಸಿಕೊಂಡು, ನೀಲಾಂಬರಿ ರಾಗವನ್ನು ಹೊರಡಿಸುತ್ತ ನಾರದನೂ, ಅವನ ಹಿಂದೆ ಲಕ್ಷ್ಮಿ, ಸರಸ್ವತಿ ಪಾರ್ವತಿಯರೂ ಅಲ್ಲಿಗೇ ಬಂದರು.

ನಾರದನು ಅನಸೂಯೆಯನ್ನು ನೋಡಿ, "ಅಮ್ಮಾ, ತ್ರಿಮೂರ್ತಿಗಳ ವಾಹನಗಳು ಮೂರೂ ನಿನ್ನ ಮನೆಯ ಬಾಗಿಲಲ್ಲಿ ನಿಂತಿರುವುದನ್ನು ನೋಡಿ ಅವರು ಇಲ್ಲಿಯೇ ಇರುವರೆಂದು ತಿಳಿದು ಬಂದೆನು. ಇನ್ನೂ ಹಿಂದಿರುಗಿ ಬಾರದಿರುವ ತಮ್ಮ ಗಂಡಂದಿರನ್ನು ಹುಡುಕಿಕೊಂಡು ಮೂವರು ದೇವಿಯರೂ ಬಂದಿದ್ದಾರೆ. ಅವರ ಗಂಡಂದಿರನ್ನು ಅವರಿಗೆ ಬಿಟ್ಟುಕೊಡಮ್ಮಾ!" ಎಂದನು.

ಅದನ್ನು ಕೇಳಿ ಅನಸೂಯೆ ಮೂವರು ಮಹಾದೇವಿಯರಿಗೂ ನಮಸ್ಕಾರ ಮಾಡಿ, "ಅಮ್ಮಗಳಿರಾ! ಆ ಉಯ್ಯಾಲೆಯ ತೊಟ್ಟಿಲಲ್ಲಿ ನಿದ್ರಿಸಿಕೊಂಡಿರುವವರು ನಿಮ್ಮವರೇ ಆದರೆ, ಕರೆದುಕೊಂಡಿ ಹೋಗಿರಿ. ಅತಿಥಿಗಳಾಗಿ ಬಂದ ಯತೀಶ್ವರರು ತೃಪ್ತಿಯಿಂದ ಮಲಗಿದ್ದಾರೆ" ಎಂದಳು.

ದೇವಿಯರು ಮೂವರೂ ಬೆರಗಾಗಿ ನೋಡಿದರು. ಲಕ್ಷ್ಮೀ ಪಾರ್ವತಿ ಸರಸ್ವತಿಯರು ಯಾವ ಮಗು ತಮ್ಮವನೆಂದು ತಿಳಿಯದೆ ತಳಮಳಿಸುವುದನ್ನು ನೋಡಿ, ನಾರದನು, "ನಿಮ್ಮ ಗಂಡಂದಿರ ಗುರುತು ತಿಳಿಯಲಿಲ್ಲವೆಂದರೇನಮ್ಮಾ? ನಾ ಚಿ ಕೊ ಳ್ಳ ಬೇ ಡಿ. ಎತ್ತಿಕೊಳ್ಳಿ!" ಎಂದನು. ಮೂವರು ದೇವಿಯರೂ ಒಂದೊಂದು ಮಗುವನ್ನು ಎತ್ತಿಕೊಂಡರು.

"ಅಯ್ಯೋ, ನಾನೊಬ್ಬಳು!" ಎಂದು ಅನಸೂಯೆ ಓಡಿಹೋಗಿ ಒಳಗಿನಿಂದ ತೀರ್ಥ ತಂದು ಆ ಶಿಶುಗಳ ಮೇಲೆ ಪ್ರೋಕ್ಷಿಸಿದಳು. ಮರುಕ್ಷಣದಲ್ಲಿ ಮೂರು ಶಿಶುಗಳೂ ನಿಜರೂಪ ತಾಳಿ ಹಾರಿ ನಿಂತರು. ಆಗ ಸರಸ್ವತಿ ಶಿವನನ್ನೂ, ಲಕ್ಷ್ಮಿ ಬ್ರಹ್ಮನನ್ನೂ, ಪಾರ್ವತಿ ವಿಷ್ಣುವನ್ನೂ ತೆಗೆದುಕೊಂಡಂತೆ ಗೊತ್ತಾಗಿ ಮೂವರು ದೇವಿಯರೂ ನಾಚಿಕೊಂಡು ದೂರ ಹೋಗಿ ನಿಂತರು. ಆಗ ಬ್ರಹ್ಮ, ವಿಷ್ಣು, ಮಹೇಶ್ವರರು ಒಬ್ಬರನ್ನೊಬ್ಬರು ಅಂಟಿಕೊಂಡು, ಒಬ್ಬರೊಳಗೊಬ್ಬರು ಕೂಡಿ ನಿಂತರು.

ಅದೇ ಹೊತ್ತಿಗೆ ಅತ್ರಿ ತಪಸ್ಸು ಮುಗಿಸಿ ಪುತ್ರವರವನ್ನು ಪಡೆದು ಅಲ್ಲಿಗೆ ಬಂದನು. ತನ್ನ ಮನೆಯಲ್ಲಿ ತ್ರಿಮೂರ್ತಿಗಳೂ ಒಂದಾಗಿರುವುದನ್ನು ನೋಡಿ, ಅವನು ಕೈಗಳನ್ನು ಜೋಡಿಸುವುದರೊಳಗೆ, ಬ್ರಹ್ಮ ವಿಷ್ಣು ಮಹೇಶ್ವರರು ಒಂದೇ ಮೂರ್ತಿ

ಯಾಗಿ "ತಂದೆಯೇ, ನಿಮ್ಮ ತಪೋಭೀಷ್ಟ ಸಿದ್ಧಿಸಿ ನಾವು ನಿಮ್ಮ ಮಗನಾದೆವು. ನಮ್ಮನ್ನು ದತ್ತಾತ್ರೇಯ ನೆಂದು ಕರೆಯಿರಿ" ಎಂದರು.

ನಡುವಿನಲ್ಲಿ ವಿಷ್ಣುವಿನ ಮುಖ, ಇರ್ಕಡೆಗಳಲ್ಲಿ ಬ್ರಹ್ಮ ಶಿವರ ಮುಖಗಳಿಂದ, ಆರು ಕೈಗಳಲ್ಲಿ ಶಂಖ, ಚಕ್ರ, ಗದಾ, ಪದ್ಮ, ತ್ರಿಶೂಲ, ಕಮಂಡಲು ಗಳೊಂದಿಗೆ ಭುಜದಲ್ಲಿ ನೇತಾಡುವ ಜೋಳಿಗೆಯಲ್ಲಿ ಭಿಕ್ಷಾಪಾತ್ರೆಯನಿಟ್ಟುಕೊಂಡು ತ್ರಿಮೂರ್ತಿಗಳ ಸಮ್ಮಿಲನದ ಏಕ ಮೂರ್ತಿಯಾಗಿ ವಿಷ್ಣು ಅತ್ರಿ ಅನಸೂಯರ ಕುಮಾರನಾಗಿ ದತ್ತಾತ್ರೇಯಾವತಾರ ವನ್ನು ಎತ್ತಿದನು.

ನಾರದನು ನಾದನಾಮಕ್ರಿಯಾ ರಾಗದಿಂದ ವೀಣೆಯನ್ನು ಮೊಳಗಿಸುತ್ತ, ದತ್ತಾತ್ರೇಯನನ್ನು ಸ್ತುತಿ ಮಾಡಿದನು. ಶಿವನ ವಾಹನವಾದ ನಂದಿ ಹೋರಿಕರುವಾಗಿ ಅವನೊಂದಿಗಿದ್ದಿತು. ನಾಲ್ಕು ವೇದಗಳು ನಾಲ್ಕು ನಾಯಿಗಳ ರೂಪದಲ್ಲಿ ಅವನನ್ನು ಅನುಸರಿಸಿಕೊಂಡಿದ್ದವು. ಸರ್ಪ, ಗರುಡ, ಹಂಸಗಳು ಅವನ ಪರಿಸರಗಳಲ್ಲಿಯೇ ಅನುಸರಿಸಿಕೊಂಡಿದ್ದುವು. ದತ್ತಾತ್ರೇಯನು ಮಹರ್ಷಿಯಾಗಿ ವನಾಂತರಗಳಲ್ಲಿ ತಿರುಗುತ್ತ, ಆತ್ಮಾನುಸಂಧಾನ ಮಾಡಿಕೊಂಡಿರುವನು. ಅನೇಕ ದಿವ್ಯಶಕ್ತಿಗಳನ್ನೂ, ಸಿದ್ಧಿಗಳನ್ನೂ ಪ್ರಸಾದಿ ಸುವ ದತ್ತಾತ್ರೇಯನನ್ನು ಸಿದ್ಧರೂ, ಜ್ಞಾನಿಗಳೂ, ಮುನಿಗಳೂ ಆರಾಧಿಸಿಕೊಂಡಿರುತ್ತಾರೆ. ಎಲ್ಲಾ ದೇವತೆ ಗಳೂ ದತ್ತಾತ್ರೇಯನಿಗೆ ವಶವರ್ತಿಗಳೇ, ಇಂತಹ ದತ್ತಾತ್ರೇಯನು ಹೈಹಯ ರಾಜವಂಶದವರಿಗೆ ಆರಾಧ್ಯ ದೈವವಾಗಿದ್ದನು.

ಕಾರ್ತವೀರ್ಯಾರ್ಜುನನು ದತ್ತಾತ್ರೇಯನನ್ನು ಅರ್ಚಿಸಿ, ಮಹಾ ಬಲ ಸಂಪನ್ನನಾಗಿ, ತನ್ನ ಸೈನ್ಯ ವನ್ನು ಸಾಗಿಸಿಕೊಂಡು ಚೈತ್ರ ಯಾತ್ರೆಗೆ ಹೊರಟನು.

ಹಾಗೆ ಹೊರಟವನು ಅರಣ್ಯದಲ್ಲಿರುವ ಜಮ ದಗ್ನಿಯ ಆಶ್ರಮಕ್ಕೆ ಹೋಗುವಂತಾಯಿತು.



ಮಹರ್ಷಿಯಾದ ಜಮದಗ್ನಿಗೆ ರಾಮನೆಂಬವನು ಕಡೆಯ ಮಗನು. ತಂದೆಯ ಮಾತೆಂದರೆ ಅವನಿಗೆ ವೇದವಾಕ್ಯ. ಯಾವಾಗಲೂ ಕೊಡಲಿ ಹಿಡಿದು ಕೊಂಡು ಕಾಡಿನಲ್ಲಿ ತಿರುಗುತ್ತ, ಊರುಗಳನ್ನೂ, ಆಶ್ರಮಗಳನ್ನೂ ನಿರ್ಮಿಸಲಿಕ್ಕಾಗಿ, ಭೂಮಿಯನ್ನು ಸಾಗುವಳಿಗೆ ಅನುಕೂಲಪಡಿಸಲಿಕ್ಕಾಗಿ ಕಾಡುಗಳನ್ನು ಕಡಿದು ಹಾಕುವುದು ಅವನ ಮುಖ್ಯ ಕೆಲಸ. ಅವನು ಹಿಮಾಲಯದಲ್ಲಿ ಕುಳಿತು ತಪಸ್ಸು ಮಾಡಿ, ಶಿವನನ್ನು ಮೆಚ್ಚಿಸಿದ್ದನು. ಶಿವನು ಅವನಿಗೆ ಮಹಾ ಪ್ರಭಾವ ಶಾಲಿಯಾದ ಕೊಡಲಿಯನ್ನು ಕೂಡಾ ಕೊಟ್ಟಿದ್ದನು. ಆ ಕೊಡಲಿಯಿಂದಲೇ ಅವನಿಗೆ ಪರಶುರಾಮನೆಂದು ಹೆಸರು ಬಂದಿತ್ತು. ಭೃಗುವಂಶದವನಾದುದರಿಂದ ಅವನನ್ನು ಭಾರ್ಗವರಾಮನೆಂದೂ ಹೇಳುವರು.

ಒಂದುಸಾರಿ ಪರಶುರಾಮನ ತಾಯಿ ರೇಣುಕಾ ದೇವಿ ನದಿಗೆ ಹೋದವಳು ಎಷ್ಟು ಹೊತ್ತಾದರೂ ಹಿಂದಿರುಗಿ ಬರಲಿಲ್ಲ. ಜಮದಗ್ನಿ ದಿವ್ಯ ದೃಷ್ಟಿಯಿಂದ

ಹೆಂಡತಿ ಏನು ಮಾಡುವಳೆಂಬುದನ್ನು ಕಂಡುಹಿಡಿದನು. ಚಿತ್ರರಥನೆಂಬ ಗಂಧರ್ವನು ಅಪ್ಸರಸಿಯರೊಂದಿಗೆ ಜಲಕ್ರೀಡೆಯಾಡುವ ಸೊಬಗನ್ನು ಮೈಮರೆತು ನೋಡುತ್ತಾ ಇದ್ದಳು ರೇಣುಕೆ. ಜಮದಗ್ನಿಗೆ ತಾಳಲಾಗದಷ್ಟು ಕೋಪ ಬಂದಿತು.

ಹೆಂಡತಿ ಬಂದ ಕೂಡಲೇ ಜಮದಗ್ನಿ ಕುಮಾರರನ್ನು ಕರೆದು ತಾಯಿಯ ತಲೆಯನ್ನು ಕಡಿದುಹಾಕಲು ಹೇಳಿದನು. ಆ ಕೆಲಸ ತಮ್ಮಿಂದಾಗದೆಂದು ಕುಮಾರರು ಹೇಳಿದರು. ಆಗಲೇ ಕಾಡಿನಿಂದ ಮನೆಗೆ ಬಂದ ಪರಶುರಾಮನೊಂದಿಗೆ ಜಮದಗ್ನಿ "ರಾಮಾ, ಅಣ್ಣಂದಿರ ತಲೆಗಳನ್ನೂ, ನಿನ್ನ ತಾಯಿಯ ತಲೆಯನ್ನೂ ಕಡಿದು ಹಾಕು" ಎಂದನು. ಕೂಡಲೇ ಪರಶುರಾಮನು ಅಣ್ಣಂದಿರ ತಲೆಗಳನ್ನೂ, ತಾಯಿಯ ತಲೆಯನ್ನೂ ಕೊಡಲಿಯಿಂದ ಕಡಿದು ಉರುಳಿಸಿದನು.

ಜಮದಗ್ನಿ ಪರಶುರಾಮನನ್ನು ಮೆಚ್ಚಿಕೊಂಡು, "ಏನು ಬೇಕೋ ಕೇಳು" ಎಂದು ಕೇಳಲು, "ಅಣ್ಣಂದಿರನ್ನೂ, ತಾಯಿಯನ್ನೂ ಬದುಕಿಸಿ ಕೊಡು ಅಪ್ಪಾ !" ಎಂದನು ಪರಶುರಾಮ.

ಜಮದಗ್ನಿ ಹಾಗೆಯೇ ಅವರನ್ನೆಲ್ಲ ಮತ್ತೆ ಬದುಕಿಸಿದನು. ತನ್ನ ತಪೋ ಮಹಿಮೆಯ ಮೇಲೆ ಪರಶುರಾಮನಿಗಿರುವ ವಿಶ್ವಾಸಕ್ಕೂ ಸೂಕ್ಷ್ಮಬುದ್ಧಿಗೂ ಜಮದಗ್ನಿ ಸಂತೋಷಪಟ್ಟು, "ಪರಶುರಾಮಾ, ನೀನು ಕಾರಣ ಜನ್ಮದವನು. ಚಿರಂಜೀವಿಯಾಗಿರುವಿ" ಎಂದು ಮನದುಂಬಿ ಆಶೀರ್ವಾದ ಮಾಡಿದನು.

ಕಾರ್ತವೀರ್ಯಾರ್ಜುನನು ವಿಜಯ ಯಾತ್ರೆಯನ್ನು ಮುಗಿಸಿ ತನ್ನ ರಾಜಧಾನಿಯಾದ ಮಾಹಿಷ್ಮತೀ ನಗರಕ್ಕೆ ಬಹಳ ಉತ್ಸಾಹದಿಂದ ಹಿಂದಿರುಗುವ ದಾರಿಯಲ್ಲಿ ಜಮದಗ್ನಿಯ ಆಶ್ರಮವನ್ನು ನೋಡಿದನು. ಆಗ ರಾಜನೂ, ಪರಿವಾರವೂ, ಸೇನೆಯವರೂ ತುಂಬಾ ಹಸಿವೆಯಿಂದಿದ್ದರು.

ಜಮದಗ್ನಿಯ ಆಶ್ರಮದಲ್ಲಿ ಕಾಮಧೇನುವಿನ ಅಂಶದಿಂದ ಹುಟ್ಟಿದ ಹೋಮಧೇನುವಿದ್ದಿತು. ಅದರ ಸಹಾಯದಿಂದ ರಾಜನಿಗೂ, ರಾಜ ಪರಿವಾರದವರಿಗೂ, ಸೈನಿಕರಿಗೂ ಜಮದಗ್ನಿ ಔತಣದೂಟವನ್ನೇ ಮಾಡಿಸಿದನು. ಎಷ್ಟು ಮಂದಿಗಾದರೂ ಬೇಕಾದುದನ್ನು ಕೊಡುವ ಆ ಧೇನುವಿನ ಮಹಿಮೆಯನ್ನು ನೋಡಿ, ಕಾರ್ತವೀರ್ಯನಿಗೆ ಆ ಧೇನು ತನ್ನ ಹತ್ತಿರ ಇರಬೇಕೆಂದು ತೋರಿತು. ಅದೊಂದಿದ್ದರೆ ಸೈನ್ಯಕ್ಕಾಗಿ ಮಾಡುವ ಖರ್ಚು ಉಳಿಯುತ್ತದೆಂದೆನಿಸಿತು. ತಾನು ಕೂಡಾ ಬೇಕಾದುದನ್ನು ಪಡೆಯಬಹುದೆಂಬ ದುರಾಶೆಯಿಂದ, ಆ ಧೇನುವನ್ನು ಮಾಹಿಷ್ಮತಿ ನಗರಕ್ಕೆ ಸಾಗಿಸಿಕೊಂಡು ಹೋಗಿರೆಂದು ಸೈನಿಕರಿಗೆ ಆಜ್ಞೆಮಾಡಿದನು. ಕ್ರೂರರಾದ ಸೈನಿಕರು ಅಡ್ಡಬಂದ ಜಮದಗ್ನಿಯನ್ನು ಕೆಡವಿ ಧೇನುವನ್ನು ಎಳೆದುಕೊಂಡು ಹೊರಟರು.






ಒಂದಾನೊಂದು ಕಾಲದಲ್ಲಿ ಒಂದಾನೊಂದು ಊರಿನಲ್ಲಿ ಒಬ್ಬಾನೊಬ್ಬಳು ಮಂತ್ರವಾದಿನಿ ಇದ್ದಳು. ಆವಳು ಎಲುವುಗಳನ್ನಿಟ್ಟುಕೊಂಡು ಮಂತ್ರ ಮಾಯೆಗಳನ್ನು ಮಾಡುವುದರಿಂದ ಅವಳ ಹೆಸರು ಕಂಕಾಳಮ್ಮನೆಂದು ಪ್ರಸಿದ್ಧವಾಗಿತ್ತು. ಅವಳು ತನ್ನ ಮಂತ್ರ ಶಕ್ತಿಯಿಂದ ನಾಯಿಗಳನ್ನು ಹೋತಗಳನ್ನಾಗಿಯೂ, ಮನುಷ್ಯರನ್ನು ಮರಗಳನ್ನಾಗಿಯೂ ಮಾಡುವಳೆಂದು ಎಲ್ಲರೂ ಹೇಳಿಕೊಳ್ಳುತ್ತಾರೆ. ಹಾಗೆ ತನ್ನ ಮಂತ್ರ ಶಕ್ತಿಯಿಂದ ಬದಲಾವಣೆಗೊಂಡ ಹೋತಗಳನ್ನು ಕೊಂದು ಮಾಂಸವನ್ನು ಅಡಿಗೆ ಮಾಡಿ ತಿಂದು ಜೀರ್ಣಿಸಿಕೊಳ್ಳುವಳಂತೆ ಅವಳು. ಹಾಗೆ ತಿನ್ನುವಾಗ ಅದಕ್ಕೆ ತಕ್ಕ ದೊಡ್ಡ ರೂಪವನ್ನೂ ತಾಳುತ್ತಾಳಂತೆ.

ಈ ಸಮಾಚಾರ ಪಾತಾಳದಲ್ಲಿದ್ದ ಒಬ್ಬ ರಾಕ್ಷಸನಿಗೆ ಗೊತ್ತಾಯಿತು. "ಅರೆ! ನಮಗಿಂತ ಜೋರಿನವಳೋ ಈ ಕಂಕಾಳಮ್ಮ? ಅಂತಹ ತಿಂಡಿ ತಿಂದ ಕಂಕಾಳಮ್ಮನ ರಕ್ತ ಎಷ್ಟು ರುಚಿಯಾಗಿರುವುದೋ!" ಎಂದು ರಾಕ್ಷಸನಿಗೆ ಬಾಯಿಯಲ್ಲಿ ಜೊಲ್ಲು ಒಸರಿತು. ಅದಕ್ಕಾಗಿ ಅವಳನ್ನು ತನ್ನ ನಿವಾಸ ಸ್ಥಾನಕ್ಕೆ ಒಯ್ಯಲು ನಿಶ್ಚಯಿಸಿದನು. ಭೂಮಿಯ ಮೇಲೆ ಬಂದು ಕಂಕಾಳಮ್ಮ ಇರುವ ಜಾಗವನ್ನು ಕಂಡು ಹಿಡಿದನು. ಮರೆಯಾಗಿ ಅವಳನ್ನು ನೋಡಿ ಪಸಂದಾಗಿರುವಳೆಂದು ತಲೆದೂಗಿದನು. ಬಳಿಕ ತಾನು ಸುಂದರನಾದೊಬ್ಬ ರಾಜಕುಮಾರನ ರೂಪದಲ್ಲಿ ಕಂಕಾಳಮ್ಮನ ಮನೆಯ ಮುಂದೆ ಬಂದನು.

"ಕಂಕಾಳಮ್ಮಾ, ಓ ಕಂಕಾಳಮ್ಮಾ! ನಿನ್ನನ್ನು ಕುರಿತು ಲೋಕದವರು ಬಹಳ ದೊಡ್ಡ ದೊಡ್ಡ ಮಾತು ಹೇಳುತ್ತಾರೆ. ಅದನ್ನೆಲ್ಲ ಕೇಳಿಯೇ ನಾನು ಬಂದದ್ದು. ನಿನ್ನ ಸೌಂದರ್ಯವನ್ನು ನೋಡಿ ನನಗೆ ನಿನ್ನನ್ನೇ ಮದುವೆಯಾಗುವ ಆಸೆಯಾಗಿದೆ. ನನ್ನನ್ನು ಮದುವೆಯಾದರೆ ನಿನಗಾಗುವ ಸಂತೋಷಕ್ಕೆ ಮೇರೆಯೇ ಇರದು. ನನಗೂ ಅಷ್ಟೇ. ನೀನೇನು ಹೇಳುತ್ತೀ ?" ಎಂದು ಕೇಳಿದನು.

ಆ ಮಾತು ಕೇಳಿದ ಕೂಡಲೇ ಕಂಕಾಳಮ್ಮ ಬೊಚ್ಚು ಬಾಯಿ ತೆರೆದು ನಗಾಡುತ್ತ, "ನಿನ್ನ ಉದ್ದೇಶ ಚೆನ್ನಾಗಿಯೇ ಇದೆ. ಆದರೆ ನನ್ನನ್ನು ನೀನು ನಿನ್ನ ಊರಿಗೆ ಎತ್ತಿಕೊಂಡು ಹೋಗಬಲ್ಲೆಯಾ? ನನ್ನನ್ನು ಎತ್ತಿಕೊಳ್ಳುವ ಶಕ್ತಿ ನಿನಗಿದ್ದರೆ, ಸಾಕುವ ಶಕ್ತಿಯೂ ನಿನಗಿದೆ ಎಂದು ನಂಬುತ್ತೇನೆ." ಎಂದು

ವಿ. ಮಂಜುನಾಥ




ಅವನನ್ನು ಅಳಿಯುವಂತೆ ನೋಡುತ್ತಾ ಕೇಳಿದಳು ಕಂಕಾಳಮ್ಮ. "ಅದಕ್ಕೇನು ಕಷ್ಟ? ನನ್ನ ಹೆಗಲ ಮೇಲೆ ಹತ್ತಿ ಕುಳಿತುಕೋ. ಹೇಗೆ ಹೊರುತ್ತೇನೆ, ನೋಡು! ಕ್ಷಣ ಮಾತ್ರದಲ್ಲಿ ನನ್ನ ಪಟ್ಟಣ ಸೇರಿಬಿಡಬಹುದು" ಎಂದನು ರಾಕ್ಷಸ ಗಂಭೀರವಾಗಿ.

"ಸರಿ, ಹೆಗಲೊಡ್ಡು!" ಎಂದು ಕಂಕಾಳಮ್ಮ ಎದ್ದು ನಿಂತಳು. ರಾಕ್ಷಸನು ಅವಳನ್ನು ಹೆಗಲ ಮೇಲೆ ಕೂಡಿಸಿಕೊಂಡು ಒಂದೆರಡು ಹೆಜ್ಜೆ ಹಾಕಿ ನಿಜ ರೂಪ ತಾಳಿ ಭೂಮಿಯನ್ನು ಒದ್ದನು, ಭೂಮಿ ಇಬ್ಭಾಗವಾಗಿ ಒಡೆದು ಪಾತಾಳ ಲೋಕಕ್ಕೆ ದಾರಿಯೊಂದು ಕಂಡಿತು.

ರಾಕ್ಷಸನು ಭೂರಂಧ್ರದ ದಾರಿಯಲ್ಲಿ ಇಳಿಯುತ್ತ ಪಾತಾಳಕ್ಕೆ ಹೊರಟನು. ಆದರೆ ಎಷ್ಟು ಪ್ರಯತ್ನ ಪಟ್ಟರೂ ಎಷ್ಟು ದಿನ ನಡೆದರೂ ಕಂಕಾಳಮ್ಮನನ್ನು ಕೆಳಗಿಳಿಸಲು ಅವನಿಗೆ ಸಾಧ್ಯವಾಗಲಿಲ್ಲ. ಅವಳನ್ನು ಎತ್ತಿ ಬೀಸಿ ಕೆಳಕ್ಕೆ ಒಗೆಯಲಿಕ್ಕೂ ಅವನಿಗೆ ಆಗಲಿಲ್ಲ. ಅವಳು ಅವನ ಕುತ್ತಿಗೆಯ ಸುತ್ತಲೂ ಕತ್ತರಿ ಹಿಡಿಕೆಯಲ್ಲಿ ಹಿಡಿದು ಕುಳಿತಿದ್ದಳು. ತನ್ನ ಕೈಯಲ್ಲಿ ಅವಳು ಸಿಕ್ಕುವುದಕ್ಕೆ ಬದಲಾಗಿ, ಅವಳ ಕಾಲುಗಳೆಡೆಯಲ್ಲಿ ತಾನು ಸಿಕ್ಕಿಬಿದ್ದೆನೆಂದು ರಾಕ್ಷಸನು ಮಿಡುಕ ತೊಡಗಿದನು.

ಆ ರಾಕ್ಷಸನ ಆಶೆಗಳೆಲ್ಲಾ ತಲೆ ಕೆಳಗಾದುವು. ಅವಳನ್ನು ಹೊರಲಾಗದೆ ಬೇಸತ್ತುಕೊಂಡನು. ಆಯಾಸವೆಂದರೇನೆಂದು ಅರಿಯದ ಆ ರಾಕ್ಷಸನಿಗೆ "ಈ ಪಿಶಾಚಿಯ ಪೀಡೆ ನನ್ನ ಹೆಗಲು ಬಿಟ್ಟರೆ ಸಾಕಪ್ಪಾ!" ಅನಿಸಿತು.

ಕಡೆಗೆ ರಾಕ್ಷಸನು ಹೋಗಿ ಬ್ರಹ್ಮರಾಕ್ಷಸನೊಂದಿಗೆ ತನ್ನ ಕಷ್ಟ ಹೇಳಿಕೊಂಡನು. "ಪ್ರಭೂ! ಈ ಹಾಳಾದವಳ ಸಮಾಚಾರ ಕೇಳಿ, ಇವಳ ಮೋಸದ ಮಾತಿಗೆ ಬಲಿಯಾದೆನು. ಈಗ ಇವಳನ್ನು ಹೇಗೆ ಕೆಳಗಿಳಿಸಲಿ? ನನ್ನ ಬುದ್ಧಿ ಮಂಕಾಯಿತು. ನೀವೇ ಒಂದು ಉಪಾಯ ಹೇಳಿರಿ" ಎಂದನು.

"ನನ್ನ ಮದುವೆಯಾಗುವ ತಾಳಿತ್ತು ನಿನಗೆಲ್ಲಿದೆಯೋ!" ಎಂದಳು ಕಂಕಾಳಮ್ಮ ಅಲಕ್ಷ್ಯವಾಗಿ ಕಾಲುಗಳಿಂದ ರಾಕ್ಷಸನ ಎದೆಯನ್ನು ಒದೆಯುತ್ತ.

ಆಗ ಬ್ರಹ್ಮರಾಕ್ಷಸನು ರಾಕ್ಷಸನ ಕಿವಿಯಲ್ಲಿ, "ಈ ಒಂದು ಹೆಂಗುಸಿಗಾಗಿ ಏಕೆ ಹೆದುರುವಿ? ಹೀಗೆ ಹೆದರಿದರೆ ನಮ್ಮ ರಾಕ್ಷಸ ಜಾತಿಗೇ ನಾಚಿಕೆಗೇಡು. ಇವಳನ್ನು ಎಲ್ಲಿಂದ ಹಿಡಿದು ತಂದೆಯೋ ಅಲ್ಲಿಗೇ ಒಯ್ಯು. ಅಲ್ಲಿ ಕಾಣುವ ಸಾಧಾರಣವಾದ ಮನುಷ್ಯ ಹುಡುಗನೊಬ್ಬನು ಇವಳನ್ನು ಅವಲೀಲೆಯಾಗಿ ಹೊರುತ್ತಾನೆ. ಅದಕ್ಕೆ ತಕ್ಕ ಹಾಗೆ ನಾನು ಮಾಡುತ್ತೇನೆ. ಹೆದರಬೇಡ" ಎಂದನು ಪಿಸುದನಿಯಿಂದ.

ಕಂಕಾಳಮ್ಮನ ಪೀಡೆಯನ್ನು ಬಿಡಿಸಿಕೊಳ್ಳಲು ಮತ್ತೆ ರಾಕ್ಷಸನು ಹಿಂದಿರುಗಿ ಪಾತಾಳದಿಂದ ಮೇಲೆ ಬಂದು ಸ್ವಲ್ಪ ದೂರ ಹೋಗಲು, ಮಾಯಾ




ರೂಪದಲ್ಲಿ ಅವನ ಹಿಂದೆಯೇ ಬಂದಿದ್ದ ಬ್ರಹ್ಮ ರಾಕ್ಷಸನು ಅಲ್ಲಿದ್ದ ಕುರುಬ ಹುಡುಗನೊಬ್ಬನ ಮೇಲೆ ಆವಹಿಸಿಕೊಂಡನು. ಕುರುಬ ಹುಡುಗ ಕಂಕಾಳಮ್ಮನ ಹೊರೆ ಹೊತ್ತ ರಾಕ್ಷಸನನ್ನು ನೋಡಿ ನಗುತ್ತ, "ಭಲೆ! ಈ ಕತ್ತೇ ಭಾರ ಏತಕ್ಕೆ ಹೊರುತ್ತೀ? ಬಹಳ ಹೊತ್ತಿನಿಂದ ಹೊರುವ ಹಾಗಿದೆ. ಪಾಪ, ನನ್ನ ಹೆಗಲಿಗೆ ಕೊಡು ನೋಡುವಾ? ನಾನೂ ಸ್ವಲ್ಪ ಹೊತ್ತು ನಿನಗೆ ಸಹಾಯ ಮಾಡುತ್ತೇನೆ" ಎಂದನು.

"ಎಲಾ! ಇವನಾವನೋ ದೇವಾಂತಕನ ಹಾಗಿದ್ದಾನೆ. ಈ ಮುದುಕಿ ಇವನ ಕಣ್ಣಿಗೆ ಮೋಹಿನಿ ಯಾಗಿ ಕಾಣುತ್ತಾಳೇನೋ! ಹಾಗೆಯೇ ಇವಳಿಗೂ ಕಂಡರೆ ನನ್ನ ಪುಣ್ಯ!" ಎಂದುಕೊಂಡು, "ಇವಳನ್ನು ಹೊರಲು ನಿನ್ನಿಂದ ಸಾಧ್ಯವೇ ನೋಡಪ್ಪಾ! ಹೆಗಲೊಡ್ಡು!" ಎಂದನು.

"ಅದಕ್ಕೇನು ಕೊಡು ಹೀಗೆ!" ಎಂದು ಕುರಬ ಹುಡುಗ ಅವಳನ್ನು ಎಳೆದು ತನ್ನ ಹೆಗಲಿಗೇರಿಸಿ ಕೊಂಡು ಬಹಳ ಹಗುರವನ್ನು ಹೊತ್ತವನಂತೆ ದಕ್ಷಿಣ ದಿಕ್ಕನ್ನು ಹಿಡಿದು ಓಡಿದನು.

"ಇನ್ನು ಆ ಮುದುಕಿ ಅವನನ್ನು ಬಿಡುವುದೆಂದ ರೇನು ? ಸದ್ಯ, ನಾನು ಬದುಕಿದೆ!" ಎಂದುಕೊಂಡು ರಾಕ್ಷಸನು ಅವನ ಕುರಿ ಮಂದೆಯನ್ನು ಸಾಗಿಸಿಕೊಂಡು ಹೋಗಲು ತೊಡಗಿದನು. ಅಷ್ಟು ಕಷ್ಟಪಟ್ಟಿದ್ದಕ್ಕೆ ಈ ಕುರಿಗಳ ಲಾಭ ತನಗಾಯಿತೆಂದು ರಾಕ್ಷಸನಿಗೆ ಸಂತೋಷ.

ರಾಕ್ಷಸನು ನಾಲ್ಕು ಹೆಜ್ಜೆ ಇಡುವಷ್ಟರಲ್ಲಿ ಕುರುಬ ಹುಡುಗ ಓಡಿ ಬಂದು ಅವನ ಇದಿರಿನಲ್ಲಿ ನಿಂತು, "ಏನಯ್ಯಾ ಇದು? ಮುದುಕೀನ ನನ್ನ ತಲೆಗೆ ಕಟ್ಟಿ ನನ್ನ ಕುರಿಗಳನ್ನು ಸ್ವಾಹಾಮಾಡಲು ನೋಡುವಿಯಾ?" ಎಂದನು.

"ಅರೆ! ಆ ಮುದಿ ಪಿಶಾಚಿಯನ್ನು ಅಷ್ಟು ಬೇಗ ಹೇಗೆ ತೊಲಗಿಸಿದೆ ?" ಎಂದನು ರಾಕ್ಷಸ.

"ಅದಕ್ಕೇನು ಕಷ್ಟ! ಪಕ್ಕದಲ್ಲೇ ದಿಕ್ಕಿಲ್ಲದವರು ಬಿದ್ದು ಸಾಯುವ ಕೆರೆಯೊಂದಿದೆ. ಅದರೊಳಗೆ ಹಾಕಿದರೆ ಎಂಥವರೂ ಮತ್ತೆ ಎದ್ದು ಬರಲಾರರು. ಅದರಲ್ಲಿ ಅವಳನ್ನು ಹಾಕಿ ಬಂದುಬಿಟ್ಟೆ. ಅವಳು ನನ್ನ ಕಂಬಳಿ ಹಿಡಿದು ಬಿಡಲಾರೆನೆಂಬಳು. ಹೋದರೆ ಹೋಗಲೆಂದು ಆ ಕಂಬಳಿ ಕೂಡಾ ಆ ಕೆರೆಗೆ ಜಾರಿಸಿಬಿಟ್ಟೆ. ಸತ್ತಳು ಕಂಕಾಳಮ್ಮ. ಅವಳ ಕತೆ ಮುಗಿಯಿತು" ಎಂದನು ಕುರುಬ ಹುಡುಗ.

ಅವನು ಮಾಡಿದ ಉಪಕಾರಕ್ಕೆ ರಾಕ್ಷಸನು ಬಹಳ ಸಂತೋಷಪಟ್ಟು, "ಹುಡುಗಾ, ನಾನು ನಿನಗೊಂದು ಉಪಕಾರ ಮಾಡುತ್ತೇನೆ. ಈ ದೇಶದ ರಾಜನ ಮಗಳಿಗೆ ಅಂಟಿಕೊಳ್ಳುತ್ತೇನೆ. ಅವಳಿಗೆ ಮಾತು ನಿಂತು ಕಣ್ಣು ಕುರುಡಾಗುತ್ತದೆ. ಇವತ್ತಿನಿಂದ ಮೂವತ್ತೊಂದನೇ ದಿನ ನೀನು ಅಲ್ಲಿಗೆ ಹೋಗಿ ರಾಜಕುಮಾರಿಯ ಕಿವಿಯಲ್ಲಿ "ನಾನು ಕುರುಬ ಹುಡುಗ ತಿಳಿಯಿತೇ ?" ಅಂತ ಹೇಳು. ನಾನು




ಅವಳನ್ನು ಬಿಟ್ಟು ಹೋಗಿ ಬಿಡುತ್ತೇನೆ. ಅವಳು ನಿನ್ನಿಂದ ಸರಿಯಾದಳೆಂದು ತಿಳಿದರೆ ರಾಜನು ನಿನಗೆ ಕೊಡುವ ಬಹುಮಾನ ಹೇಗಿದ್ದೀತು. ಗೊತ್ತಿದೆಯಷ್ಟೇ ?" ಎಂದು ಹೇಳಿದನು.

ಆ ಸಮಯದಲ್ಲಿ ಆ ಹುಡುಗನಿಗೆ ಹಿಡಿದ ಬ್ರಹ್ಮರಾಕ್ಷಸನು, ಕಂಕಾಳಮ್ಮನ ನೆನಪು ಮಾತ್ರ ಅವನಿಗೆ ಇರುವಂತೆ ಮಾಡಿ, ಅವನನ್ನು ಬಿಟ್ಟು ಹೋಗಿದ್ದನು. ಆದರೂ ಅವನು ರಾಕ್ಷಸನು ಹೇಳಿದಂತೆ ಮಾಡುವೆನೆಂದನು. ಅವನು ನಗರಕ್ಕೆ ಹೋದಾಗ ಯಾರ ಬಾಯಲ್ಲಿ ನೋಡಿದರೂ ರಾಜಕುಮಾರಿಯ ಮಾತೇ. "ರಾಜಕುಮಾರಿಗೆ ಮಾತು ಬಿದ್ದುಹೋಗಿದೆ. ಕಣ್ಣು ಕಾಣೋದಿಲ್ಲ. ಅವಳನ್ನು ಗುಣಪಡಿಸಿದವರಿಗೆ ಆ ರಾಜಕುಮಾರಿಯನ್ನೂ, ಅರ್ಧರಾಜ್ಯವನ್ನೂ ಕೊಡುತ್ತಾರಂತೆ" ಎಂದು ಜನರು ಹೇಳುತ್ತಿದ್ದರು.

ಮೂವತ್ತೊಂದನೇ ದಿನ ಕುರುಬ ಹುಡುಗ ರಾಜನ ಅರಮನೆಗೆ ಹೋದನು. ಅಷ್ಟರೊಳಗೆ ದೊಡ್ಡ ದೊಡ್ಡ ರಾಜವೈದ್ಯರೂ, ಭೂತವೈದ್ಯರೂ ರಾಜಕುಮಾರಿಗೆ ಚಿಕಿತ್ಸೆ ಮಾಡಿ ಸೋತು ಹೋಗಿದ್ದರು. ಕುರುಬ ಹುಡುಗನ ವೇಷ ನೋಡಿ ಎಲ್ಲರೂ ಅಸಹ್ಯ ಪಟ್ಟರೂ, ವೈದ್ಯನೆಂದು ಹೇಳಿಕೊಂಡುದರಿಂದ ಅವನಿಗೆ ಪ್ರವೇಶ ದೊರಕಿತು,

ಕುರುಬನು ಠೀವಿಯಿಂದಲೇ ಅಂತಃಪುರದೊಳಗೆ ಹೋದನು. ಭಾರೀ ತಿಳಿದವನ ಹಾಗೆ ಮಂತ್ರ ತಂತ್ರಗಳ ನಟನೆ ಸ್ವಲ್ಪ ಮಾಡಿದನು. ಆಮೇಲೆ ರಾಕ್ಷಸನು ಹೇಳಿಕೊಟ್ಟ ಮಹಾಮಂತ್ರವನ್ನೂ ರಾಜಕುಮಾರಿಯ ಕಿವಿಯಲ್ಲಿ ಹೇಳಿದನು.

ಕೂಡಲೇ ಅವಳನ್ನು ಆವರಿಸಿಕೊಂಡ ರಾಕ್ಷಸನು ಬಿಟ್ಟು, ಹೋಗುತ್ತ ಕುರುಬನ ಕಿವಿಯಲ್ಲಿ "ಕುರುಬಾ ಇದೇ ಕಡೇ ಸಾರಿ. ಇಂತಹ ಚಿಕಿತ್ಸೆ ಇನ್ನೆಲ್ಲಿಯಾದರೂ ಮಾಡಿದರೆ ನಿನ್ನ ತಲೆ ಹಾರಿಹೋಗುತ್ತದೆ. ಜಾಗ್ರತೆ!" ಎಂದು ಎಚ್ಚರಿಸಿಯೇ ಹೋದನು.

ಮರು ನಿಮಿಷದಲ್ಲಿ ರಾಜಕುಮಾರಿ ಎಂದಿನಂತೆ ನಗುತ್ತ, ನೋಡುತ್ತ ಮಾತಾಡತೊಡಗಿದಳು. ಅರಮನೆಯಲ್ಲಿ ಮಂಗಳ ವಾದ್ಯಗಳು ಮೊಳಗಿದುವು. ಕುರುಬ ಹುಡುಗ ರಾಜನಾದನು. ಆ ರಾಜಕುಮಾರಿಯೊಂದಿಗೆ ಅವನ ಮದುವೆಯೂ ಆಯಿತು. ಆದರೆ ಕಥೆ ಇಷ್ಟಕ್ಕೇ ಮುಗಿಯಲಿಲ್ಲ.

ರಾಜಕುಮಾರಿಯನ್ನು ಅಂಟಿಕೊಂಡು ರಾಜವೈಭವದ ರುಚಿ ಹಿಡಿದ ರಾಕ್ಷಸನು ಪಕ್ಕದ ರಾಜನ ಕುಮಾರಿಯನ್ನು ಹಿಡಿದು, ಪೀಡಿಸಲು ಪ್ರಾರಂಭಿಸಿದನು. ಅವಳಿಗೂ ಮಾತೂ, ಕಣ್ಣೂ ಹೋದುವು.

ಆ ರಾಜನು ಎಷ್ಟೋ ವೈದ್ಯ ಚಿಕಿತ್ಸೆಗಳನ್ನು ಮಾಡಿಸಿದನು. ಎಲ್ಲವೂ ವ್ಯರ್ಥವಾದುವು. ಕಡೆಗೆ ರಾಜನಾದ ಕುರುಬನ ಚಿಕಿತ್ಸೆಯನ್ನು ತಿಳಿದು, ಅವನೇ ಬಂದು ತನ್ನ ಮಗಳನ್ನು ಗುಣಪಡಿಸಬೇಕೆಂದು ಆ ರಾಜನು ಸಮಾಚಾರ ಕಳುಹಿಸಿದನು. ಅದನ್ನು ಕೇಳಿ ರಾಜನಾದ ಕುರುಬನಿಗೆ ಗಾಬರಿಯಾಯಿತು.

ರಾಕ್ಷಸನು ರಾಜಕುಮಾರಿಯನ್ನು ಬಿಟ್ಟುಹೋಗುವಾಗ ತನ್ನ ಕಿವಿಯಲ್ಲಿ ಹೇಳಿದ ಕೊನೆಯ ಮಾತುಗಳು ಅವನ ನೆನಪಿನಲ್ಲಿದ್ದುವು.

ಅಂತಲೇ ಅವನು ಆ ರಾಜನಿಗೆ "ಅಯ್ಯಾ, ನಾನು ಮಾಂತ್ರಿಕನಲ್ಲ. ತಾಂತ್ರಿಕನೂ ಅಲ್ಲ. ವೈದ್ಯನಂತೂ ಮೊದಲೇ ಅಲ್ಲ. ಒಂದು ವರಪ್ರಸಾದದಿಂದ ಒಮ್ಮೆ ಮಾತ್ರ ಈ ರಾಜಕುಮಾರಿಯನ್ನು ಗುಣಪಡಿಸಲು ಸಾಧ್ಯವಾಯಿತು. ಆ ಮಂತ್ರಶಕ್ತಿ ಅಲ್ಲಿಗೇ ಮುಗಿಯಿತು. ಇನ್ನು ನನ್ನಿಂದ ಏನೂ ಆಗದು" ಎಂದು ವಿನಯದಿಂದ ಹೇಳಿ ಕಳುಹಿಸಿದನು.

ಈ ಮಾತನ್ನು ಆ ರಾಜನು ಒಪ್ಪದೆ, "ನನ್ನ ಮಗಳಿಗೆ ನೀನು ಗುಣಪಡಿಸದೆ ಹೋದರೆ, ಯುದ್ಧಕ್ಕೆ ಸಿದ್ಧನಾಗಿರು" ಎಂದು ಕಠಿಣವಾದ ಪ್ರತ್ಯುತ್ತರ ಕಳುಹಿಸಿದನು.

ಹೊಸ ರಾಜನಾದ ಕುರುಬನು, ಯುದ್ಧವೆಂದ ಕೂಡಲೇ ಹೆದರಿದನು. ಈಗ ತಾನೇ ರಾಜನಾದ ತಾನು ಯುದ್ಧದಲ್ಲಿ ಗೆಲ್ಲಲು ಸಾಧ್ಯವಾಗದು. ಕಡೆಗೆ ಏನೋ ಯೋಚಿಸಿ ಒಂದು ನಿರ್ಧಾರಕ್ಕೆ ಬಂದನು. ಧೈರ್ಯದಿಂದ ಆ ರಾಜನ ಅರಮನೆಗೆ ಹೋದನು. ಮೊದಲಿನ ಹಾಗೆ ಮಂತ್ರ ತಂತ್ರಗಳನ್ನೆಲ್ಲ ಅಟ್ಟಹಾಸದಿಂದಲೇ ಮಾಡಿದನು.

ಕಡೆಗೆ ರಾಜಕುಮಾರಿಯ ಕಿವಿ ಕಿತ್ತು, ಹೋಗುವಷ್ಟು ಗಟ್ಟಿಯಾದ ಧ್ವನಿಯಲ್ಲಿ "ಇಕೋ! ನಾನು ಹೇಳುವ ಈ ಮಾತುಗಳನ್ನು ಜಾಗರೂಕತೆಯಿಂದ ಕೇಳು. ಆ ದಿನ ನಾನು ಸಾವಿನ ಕೆರೆಯಲ್ಲಿ ಹಾಕಿ ಬಂದ ಕಂಕಾಳಮ್ಮ ಸತ್ತಳೆಂದುಕೊಂಡದ್ದು ಸುಳ್ಳಾಯಿತು. ಅವಳು ಬದುಕಿ ಮೇಲೆ ಬಂದು ನಿನ್ನನ್ನು ಹುಡುಕಿಕೊಂಡು ಈ ಕಡೆಗೇ ಬರುತ್ತಾಳೆಂದು ನನಗೆ ತಿಳಿಯಿತು. ನೀನು ನನಗೆ ಉಪಕಾರ ಮಾಡಿದವನೆಂಬುದಕ್ಕೆ ಇದನ್ನು ಮುಂದಾಗಿ ನಿನಗೆ ತಿಳಿಸಲು ಓಡೋಡಿ ಬಂದೆ..."

ಅವನ ಮಾತು ಪೂರ್ತಿಯಾಗುವುದಕ್ಕೆ ಮೊದಲೇ, ಕಂಕಾಳಮ್ಮ ಬದುಕಿರುವಳೆಂಬ ಮಾತು ಕಿವಿಗೆ ಬಿದ್ದ ಕೂಡಲೇ ರಾಜಕುಮಾರಿಯನ್ನು ಹಿಡಿದ ರಾಕ್ಷಸನು "ಅಯ್ಯೋ!" ಎಂದು ದೊಡ್ಡ ಕೂಗು ಹಾಕಿ ಓಡಿಹೋದನು. ಓಡಿದವನು ನೆಟ್ಟಗೆ ಪಾತಾಳಕ್ಕೇ ಹೋಗಿ ಅಡಗಿದನು.

ರಾಕ್ಷಸನು ಬಿಟ್ಟು ಹೋದ ಕ್ಷಣದಿಂದ ಆ ರಾಜಕುಮಾರಿ ಪೂರ್ತಿ ಗುಣಮುಖಳಾದಳು. ಆ ರಾಜನು ಕೂಡಾ ತನ್ನ ವಾಗ್ದಾನದ ಪ್ರಕಾರ ಅವಳನ್ನು ಆ ಕುರುಬ ರಾಜನಿಗೇ ಕೊಟ್ಟು ಮದುವೆ ಮಾಡಿದನು.

ಈ ವಿಧವಾಗಿ ಅದೃಷ್ಟಶಾಲಿಯಾದ ಸಾಮಾನ್ಯ ಕುರುಬನು ಇಬ್ಬರು ರಾಣಿಯರ ಗಂಡನಾದನು.



## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ ರೂ. ೫೦

**ಗೆದ್ದ ಶೀರ್ಷಿಕೆಗಳು ೧೯೮೩ ಅಕ್ಟೋಬರ್ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ.**



K. S Vijayaker



Pranlal Patel

★ ಮೇಲಿನ ಫೋಟೋಗಳಿಗೆ ಸರಿಹೊಂದುವಂತೆ ಒಂದು ವಾಕ್ಯದಲ್ಲಾಗಲೀ, ಸಂಬಂಧಿಸಿದಂತಿರುವ ಎರಡು ವಾಕ್ಯಗಳಲ್ಲಾಗಲೀ ಶೀರ್ಷಿಕೆ ಬರೆಯಬೇಕು. ★ ಆಗಸ್ಟ್ ೧೦ರೊಳಗೆ ಶೀರ್ಷಿಕೆಗಳು ನಮಗೆ ತಲಪಬೇಕು. ಆಮೇಲೆ ಬಂದ ಶೀರ್ಷಿಕೆಗಳು ಪರಿಶೀಲಿಸಲ್ಪಡುವುದಿಲ್ಲ. ★ ಶೀರ್ಷಿಕೆಗಳಲ್ಲಿ ಅತ್ಯುತ್ತಮವೆಂದು ನಾವು ನಿರ್ಧರಿಸುವ ಒಂದು ಜತೆಗೆ ರೂ. ೫೦ ಬಹುಮಾನ. ★ ಶೀರ್ಷಿಕೆಗಳನ್ನು ಪೋಸ್ಟ್ ಕಾರ್ಡಿನಲ್ಲೇ ಬರೆಯಬೇಕು. ಅದರಲ್ಲಿ ಬೇರೆ ವಿಷಯ ಬರೆಯಬಾರದು.

ವಿಳಾಸ : ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದರಾಸು–೬೦೦ ೦೨೬

---

### ಜೂನ್ ಸ್ಪರ್ಧೆಯ ಫಲಿತಾಂಶ :

ಮೊದಲನೇ ಫೋಟೋ : ವೇಷಕ್ಕೆ ತಕ್ಕ ಕ್ರಮವೂ ಗೊತ್ತು

ಎರಡನೇ ಫೋಟೋ : ವೇಷ ಜೋರಾದರೂ ಅಳಲಿಕ್ಕಷ್ಟೇ ಗೊತ್ತು

ಕಳುಹಿಸಿದವರು : ಅನಂತ ಕುಲಕರ್ಣಿ, ಬ. ಬಾಗೇವಾಡಿ-೫೮೬೨೦೩

ಬಹುಮಾನ ರೂ. ೫೦/– ಈ ತಿಂಗಳ ಆಖೈರಿನೊಳಗೆ ಕಳುಹಿಸಲಾಗುವುದು

### ನಿಮಗೆ ಗೊತ್ತೇ ? ಉತ್ತರಗಳು :

೧. ಗೋಪುರಂ. ೨. ರಾಜಾ ಉಗ್ರಸೇನನಿಂದ. ಆ ಕಾಲದಲ್ಲಿ ಆಗ್ರಾಕ್ಕೆ ಅಗ್ರಾವನ್ ಎಂದು ಹೆಸರು. ೩. ಡೋರ್ಜೆಲಿಂಗ್–ಡೋರ್ಜೇ ಶಾಸಿಯ ನಿವಾಸಸ್ಥಾನ. ೪. ಸಂಸ್ಕೃತದಲ್ಲಿ ಕಾಶ ಅಂದರೆ ಬೆಳಕು. ಕಾಶೀ ಅಂದರೆ ಭಕ್ತರಿಗೆ ಬೆಳಕಿನ ದಾರಿ. ವರುಣ ಮತ್ತು ಅಸಿ ಎಂಬ ನದಿಗಳಿಂದ ವಾರಣಾಸಿ ಎಂಬ ಹೆಸರು ಬಂತು. ಆ ನದಿಗಳು ನಗರದ ಸುತ್ತಾ ಪ್ರವಹಿಸುತ್ತವೆ. ೫. ಹರ್ಯಾಣಾದ ಚಂಡೀಘರ್‌ನಲ್ಲಿರುವ ಜಾಕೀರ್‌ಹುಸೇನ್ ಗುಲಾಬೀ ತೋಟ. ೬. ಘೂಮ್. ಡಾರ್ಜಿಲಿಂಗಿಗೆ ಎಂಟು ಕಿಲೋಮೀಟರ್ ದೂರದಲ್ಲಿ. ೭. ಆಗ್ರಾ ಕೋಟೆಯಲ್ಲಿರುವ ಮೋತೀ ಮಸೀದಿ.

Printed by B. V. REDDI at Prasad Process Private Ltd., and Published by B. VISWANATHA REDDI for CHANDAMAMA CHILDREN'S TRUST FUND (Prop. of Chandamama Publications) 188, Arcot Road, Madras-600 026 (India). Controlling Editor: NAGI REDDI.

**Results of Chandamama—Camlin Colouring Contest No. 30 (Kannada)**

*1st Prize:* P. V. Tarun Rao, Raichur-584 101. *2nd Prize:* Vani Shri, Bhadravathi. Chilanand, Babugouda Patil, Shirguppi. *3rd Prize:* K. Ramachandra P. Bhat, Kumta. Vanitha V. Raichur, Bangalore-10. M. Shoba, Bangalore-22. K. Ramchandra P. Bhat, Gudeangadi. V. Uma, Mysore-2. N. S. Umesh Kumar, Bangalore-560 005. Kamalakar M. Babanagar, Bangalore-21. V. Muralidhara, Mysore-570 004. Hanika-Suvarna, Mangalore-3. Luladara, Karkala. Usha J. Anchan, Bombay-400 103.




## ೩

[ಪಿಂಗಳನ ಸಹಾಯದಿಂದ ಪದ್ಮಪಾದನು ಸರೋವರದೊಳಗಿನಿಂದ ಎರಡು ಮೊಸಳೆ ಮರಿಗಳನ್ನು ಹಿಡಿದುಕೊಂಡು ಮೇಲೆ ಬಂದನು. ಆಮೇಲೆ ಪಿಂಗಳನಿಗೆ ತಾನು ಯಾರೆಂಬುದನ್ನು ಹೇಳಿ, ಭಲ್ಲೂಕ ಪರ್ವತಗಳವರೆಗೆ ತನ್ನೊಂದಿಗೆ ಬರಬೇಕೆಂದು ಅವನೊಂದಿಗೆ ಹೇಳಿದನು. ತನ್ನ ತಂದೆಯ ಗುರುವಾದ ವೃದ್ಧನೊಬ್ಬನು ಮಹಾಮಾಯನೆಂಬ ಮಂತ್ರವೇತ್ತನನ್ನು ಕುರಿತು ಹೇಳಿದ ವೃತ್ತಾಂತವನ್ನು ಪಿಂಗಳನಿಗೆ ಹೇಳತೊಡಗಿದನು.]

ಆ ಭಲ್ಲೂಕ ಪರ್ವತಗಳ ಕಣಿವೆಯಲ್ಲಿ ಅಂಕುಡೊಂಕಾಗಿ ಅಲ್ಲಲ್ಲಿ ಸುಳಿಗಳಿಂದೊಡಗೂಡಿ ಹರಿಯುವ ನದಿಯೊಂದಿದೆ. ಆ ನದಿಯ ಗರ್ಭದಲ್ಲಿ ಒಂದು ದೇವಾಲಯವು ಪಾಳುಬಿದ್ದು ಹುದುಗಿದೆ. ಆ ದೇವಾಲಯದಲ್ಲಿಯೇ ಮಹಾ ಮಾಯನೆಂಬ ದೊಡ್ಡ ಮಾಂತ್ರಿಕನು ಸಮಾಧಿಯಾಗಿದ್ದಾನೆ. ಅವನು ಸಮಾಧಿಯಾದ ಜಾಗದಲ್ಲಿ ಮುಖ್ಯವಾದ ಮೂರು ವಸ್ತುಗಳಿವೆ. ಒಂದು, ಅವನ ಬೆರಳಿನಲ್ಲಿರುವ ಉಂಗುರ, ಅದನ್ನು ಧರಿಸಿದವನಿಗೆ ಭೂಗರ್ಭದೊಳಗಿರುವ ನಿಧಿ ನಿಕ್ಷೇಪಗಳೆಲ್ಲಾ ಕಂಡು ಬರುತ್ತವೆ. ಎರಡನೆಯದು, ವಜ್ರಗಳು ಹೊದಿಸಲ್ಪಟ್ಟ ಹಿಡಿಕೆಯುಳ್ಳ ಕತ್ತಿ. ಅದರಿಂದ ಹೊರಡುವ ಅಗ್ನಿಕಣಗಳು ಎಂತಹ ಶತ್ರುವನ್ನಾದರೂ ನಾಶಮಾಡುತ್ತವೆ. ಮೂರನೆಯದು ಬಂಗಾರದಿಂದ ಮಾಡಲ್ಪಟ್ಟ ಭೂಗೋಳ. ಈ ಭೂಗೋಳವನ್ನು ಸಂಪಾದಿಸಿಕೊಂಡವನು ಅದನ್ನು ಗುಂಡಗೆ ತಿರುಗಿಸಿ, ತಾನು ಯಾವ ದೇಶಕ್ಕೆ ಚಕ್ರವರ್ತಿಯಾಗಬೇಕೆಂದು ನೆನೆಸಿದರೆ, ಕೂಡಲೇ ಅವನ ಕೋರಿಕೆ ನೆರವೇರಿ ಬಿಡುತ್ತದೆ. ಆ ಮೂರು ವಸ್ತುಗಳನ್ನು ವಶಪಡಿಸಿಕೊಂಡವರಿಗೆ ಎಲ್ಲಿಯೂ ಯಾವುದೂ ಯಾರೂ ಇದಿರುನಿಲ್ಲಲು ಸಾಧ್ಯವಿಲ್ಲ.



ಆ ಮಹಾ ಮಾಯನ ಈ ಮೂರು ವಸ್ತುಗಳನ್ನು ಸಂಪಾದಿಸಬೇಕಾದರೆ, ಮೊದಲು ಶುಕ ಸರೋವರದಲ್ಲಿ ಮೊಸಳೆಗಳ ರೂಪದಲ್ಲಿರುವ ಅವನ ಶಿಷ್ಯರನ್ನು ಕೈವಶ ಮಾಡಿಕೊಳ್ಳಬೇಕು. ಇದಕ್ಕೆ ಪಿಂಗಳನೆಂಬ ಹೆಸರಿರುವ ವಿಮಾನುಗಾರನ ಸಹಾಯ ಅಗತ್ಯವಾಗುತ್ತದೆ. ಆಮೇಲೆ ಅದೇ ಪಿಂಗಳನ ಸಹಾಯದಿಂದಲೇ ಮಹಾಮಾಯನ ಉಂಗುರ, ಕತ್ತಿ, ಭೂಗೋಳಗಳನ್ನು ಕೂಡಾ ಸಾಧಿಸಿಕೊಳ್ಳಬೇಕು. ಆ ಮೂರು ವಸ್ತುಗಳನ್ನೂ ಸಾಧಿಸಿಕೊಂಡವರಿಗೆ ಮಾತ್ರವೇ ನಿಮ್ಮ ತಂದೆ ಬಿಟ್ಟು ಹೋದ ಮಂತ್ರಗ್ರಂಥದಿಂದ ಪ್ರಯೋಜನವಾಗುತ್ತದೆ. ಆದುದರಿಂದ ಮೊದಲು ಆ ಮೂರು ವಸ್ತುಗಳು ವಶವಾಗಬೇಕು.

"ಗೊತ್ತಾಯಿತೇ ಪಿಂಗಳಾ, ನಮ್ಮ ತಂದೆಯ ಗುರುಗಳು ಇಷ್ಟರ ವರೆಗೆ ಹೇಳಿ, ನಾವು ಮೂವರ ಮುಖಗಳನ್ನೂ ಪರೀಕ್ಷಿಸಿ ನೋಡಿದರು. ಶುಕ ಸರೋವರದೊಳಗೆ ಮೊಸಳೆಯ ರೂಪಧರಿಸಿಕೊಂಡಿರುವ ಮಹಾ ಮಾಯನ ಶಿಷ್ಯರನು ಮೊದಲು ಕೈವಶ ಪಡಿಸಿಕೊಳ್ಳಬೇಕಾಗಿರುತ್ತದೆಂದು ಕೇಳಿದ ಕೂಡಲೇ ನನ್ನ ಸರ್ವಾಂಗವೂ ಜುಮ್ಮೆಂದಿತು. ಮಹಾ ಮಾಂತ್ರಿಕನಾದ ಮಹಾ ಮಾಯನ ಶಿಷ್ಯರೊಂದಿಗೆ, ಅದರಲ್ಲೂ ಅವರು ಮೊಸಳೆಗಳಾಗಿ ನೀರಿನ ಅಡಿಯಲ್ಲಿರುವಾಗ ಅವರೊಂದಿಗೆ ಹೋರಾಡುವುದೆಂದರೆ ಸಾಮಾನ್ಯ ಕೆಲಸವೇನಲ್ಲ. ಇದನ್ನು ಯೋಚಿಸುತ್ತಾ ಮಾತಾಡದೆ ಸುಮ್ಮನಿದ್ದೆ.

"ನನ್ನ ಉಳಿದಿಬ್ಬರು ಸಹೋದರರು ಕೂಡಾ ಇದನ್ನು ಕೇಳಿ ನನ್ನ ಹಾಗೆಯೇ ಹೆದರಿಕೊಂಡರು. ಗುರುಗಳು ನಾವು ಮೂವರನ್ನೂ ನೋಡಿ, ನಮ್ಮ ಅಂತರ್ಯ ತಿಳಿದವರಂತೆ ಗಟ್ಟಿಯಾಗಿ ನಗಾಡಿ, 'ಮಹಾ ಮಾಯನ ಶಿಷ್ಯರನ್ನು ಜಯಿಸುವುದರಲ್ಲಿ, ನಾನು ಹೇಳಿದ ವಿಮಾನುಗಾರ ಪಿಂಗಳನನ್ನು ಮರೆತಿರೇನು ? ನಿಮಗೆ ಅವನು ತುಂಬಾ ಸಹಾಯ ಮಾಡಬಲ್ಲನು. ಆದರೆ ನೀವು ಮಾತ್ರ ಈ ಪ್ರಯತ್ನದಲ್ಲಿ ಪ್ರಾಣ ಕೊಡಬೇಕಾಗಿ ಬಂದರೂ ಬರಬಹುದು. ಇದನ್ನು ಮುಂದಾಗಿ ನಿಮಗೆ ಹೇಳಿ ಎಚ್ಚರಿಸುವೆನು. ಏಕೆಂದರೆ ಎಚ್ಚರಿಕೆಯಿಂದಿದ್ದರೆ ಪ್ರಾಣ ಉಳಿಸಿಕೊಳ್ಳಲೂಬಹುದು' ಎಂದರು.

"ಹೀಗೆ ಗುರುಗಳು ಹೇಳಿದ ಮಾತಿಗೆ ನಾವು ಮೂವರು ಸಹೋದರರಲ್ಲಿ ಮೊದಲು ಮಂಡನನು ಉತ್ತರಕೊಟ್ಟನು. 'ನಾನು ಈ ಕಾರ್ಯಕ್ಕೆ ತಯಾರಾಗಿದ್ದೇನೆ. ನಮ್ಮ ತಂದೆ ಬಿಟ್ಟು ಹೋದ ಮಂತ್ರಗ್ರಂಥದ ಮೇಲಿರುವ ನಿಷ್ಠೆ ನನಗೆ ನನ್ನ ಪ್ರಾಣದ ಮೇಲೆ ಕೂಡಾ ಇಲ್ಲ. ಸಿಕ್ಕಿದರೆ ನನ್ನ ಅದೃಷ್ಟ ಹೋದರೆ ಎಂದೋ ಒಂದು ದಿನ ಹೋಗುವ ಜೀವ!' ಎಂದನು.

"ಅವನು ಹಾಗೆ ಹೇಳಿದ ಕೂಡಲೇ ನನಗೂ ಅನುರೂಪವಾಗಿ ಕೂಡಾ ಧೈರ್ಯ ಬಂತು.



ನಾವೂ ಮಹಾಮಾಯನ ಶಿಷ್ಯರೊಂದಿಗೆ ಹೋರಾಡಲು ಸಿದ್ಧರಾಗಿರುವೆವೆಂದು ಹೇಳಿದೆವು. ಆಗ ಗುರುಗಳು ನಮಗೆ ಶುಕಸರೋವರಕ್ಕೆ ಹೋಗುವ ದಾರಿಯನ್ನು ಹೇಳಿ, ನಿನ್ನಿಂದ ಕೈ ಕಟ್ಟಿಸಿಕೊಂಡು, ಸರೋವರದ ನೀರಿಗೆ ಹಾಕಿಸಿಕೊಂಡ ಮೇಲೆ, ಏನು ಮಾಡಬೇಕೆಂಬುದನ್ನೆಲ್ಲಾ ಹೇಳಿದರು. ಗುರುಗಳು ಹೇಳಿದ ಹಾಗೆ ನೀನೂ ಮಾಡಬೇಕಾದ ಸಹಾಯ ಮಾಡಿದಿ "

ಎಂದು ಪದ್ಮಪಾದನು ಹೇಳಿದುದನ್ನೆಲ್ಲ ಕೇಳಿ, "ಓಹೋ ! ನಿಮ್ಮ ಸಮಾಚಾರ ಬಹಳ ಅದ್ಭುತವೇ ಸರಿ. ಈವರೆಗೆ ನೀವು ಮೂವರಿಗೂ ನಾನು ಮಾಡಿದ ಸಹಾಯವೇನೋ ಆಯಿತಪ್ಪ ? ಈಗ ನಿಮ್ಮೊಂದಿಗೆ ನಾನು ಭಲ್ಲೂಕ ಪರ್ವತಗಳ ಕಡೆಗೆ ಬರಬೇಕಾದ ಆಗತ್ಯವೇನಿದೆ ? ಅಸಲು ನಿಮ್ಮ ಗೊಡವೆ ನನಗೇಕೆ ?" ಎಂದು ಕೇಳಿದನು.

ಪದ್ಮಪಾದನು ಅವನ ಪ್ರಶ್ನೆಯನ್ನು ಕೇಳಿ ಸ್ವಲ್ಪ ಆಲೋಚನೆ ಮಾಡಿ, ಆಮೇಲೆ ಪಿಂಗಳನ ಬೆನ್ನನ್ನು ಆಪ್ಯಾಯತೆಯಿಂದ ತಡವುತ್ತ, " ಪಿಂಗಳಾ, ನೀನು ನನ್ನನ್ನು ಕುರಿತು ತುಂಬಾ ಹೆದರಿಕೊಳ್ಳುವ ಹಾಗಿದೆ, ನನ್ನಿಂದ ನಿನಗೆ ಎಂತಹ ಕೆಡುಕೂ ಆಗ ಲಾರದು. ಅದಕ್ಕೆ ಬದಲಾಗಿ ಬಹುದೊಡ್ಡ ಒಳ್ಳೆಯದೇ ಆಗುತ್ತದೆಂದು ನಂಬು. ನದಿಯ ಗರ್ಭದಲ್ಲಿರುವ ಮಹಾ ಮಾಯನು ಸಮಾಧಿಯಾದ ಪಾಳು ದೇವಳದೊಳಗೆ ಪ್ರವೇಶಿಸಬೇಕಾದವನೇ ನೀನು. ಆ ಕೆಲಸ ಬೇರೊಬ್ಬರಿಂದ ಸಾಧ್ಯವಾಗು ವಂತಹುದಲ್ಲ " ಎಂದನು.

" ಎಷ್ಟಾದರೂ ನಾನೊಬ್ಬ ಸಾಮಾನ್ಯ ಮನುಷ್ಯ. ನೀವು ಸಾಮಾನ್ಯದವರಲ್ಲ. ನಿಮ್ಮಿಂದ ನನಗೇನೂ ಹಾನಿಯಾಗುವುದಿಲ್ಲವೆಂದು ನನಗೆ ಪ್ರಮಾಣ ಮಾಡಿ ನಂಬಿಗೆ ಹುಟ್ಟಿಸಬಲ್ಲಿರಾ ?" ಎಂದು ಪಿಂಗಳನು ನೇರಾಗಿಯೇ ಕೇಳಿದನು.

ಪದ್ಮಪಾದನು ಪ್ರಮಾಣಮಾಡಿ ಹೇಳಿದನು. ಅದನ್ನು ಕೇಳಿ ಪಿಂಗಳನು ಆದುದಾಗಲೆಂದು ನಂಬಿದನು. ಆಗ ಅವನಿಗೆ ತಾಯಿಯ ನೆನಪು ಬಂದಿತು. " ನಾನು ಭಲ್ಲೂಕ ಪರ್ವತಗಳ ಕಡೆಯಿಂದ ಹಿಂದಿರುಗಿ ಬರಲು ಎಷ್ಟು ದಿನ ಹಿಡಿದೀತು ?" ಎಂದು ಕೇಳಿದನು.

" ಎರಡೇ ತಿಂಗಳು. ಅದಕ್ಕಿಂತ ಹೆಚ್ಚು ಕಾಲ ಬೇಕಾಗುವುದಿಲ್ಲ. ನೀನು ಕೆಲಸ ಮುಗಿದು ಮನೆಗೆ ಹಿಂದಿರುಗುವಾಗ ಹೀಗೆ ಇರಲಾರಿ. ನಿನ್ನನ್ನು ಈ ಪ್ರಪಂಚದಲ್ಲಿ ಎಲ್ಲರಿಗಿಂತ ಹೆಚ್ಚಿನ ಧನವಂತನಾಗಿ ಮಾಡುವೆನೆಂದು ಮಾತುಕೊಟ್ಟಿದ್ದೇನಪ್ಪ ?" ಎಂದನು ಪದ್ಮಪಾದ.

" ಆ ಮಾತು ಆಮೇಲಿನದಾಯಿತು. ಪ್ರಸ್ತುತ ನಾನು ನಾಳೆಯ ಗತಿಯನ್ನು ಹುಡುಕುವ ಪರಿಸ್ಥಿತಿಯಲ್ಲಿರುವ ಬಡವ. ದಿನಾ ನಾನು ಸಂಪಾದಿಸಿದರೇನೇ ದಿನ ಸಾಗಬೇಕು. ನಾನು ಮನೆಯಲ್ಲಿಲ್ಲದ ಎರಡು

ತಿಂಗಳವರೆಗೆ ನನ್ನ ತಾಯಿಯೂ ಸಹೋದರರೂ ಬದುಕುವ ದಾರಿ ಹೇಗೆ ಹೇಳಿ ?" ಎಂದನು ಪಿಂಗಳ.

"ಅಷ್ಟೇ ತಾನೇ ?" ಎಂದು ಪದ್ಮಪಾದನು ಕುದುರೆಯ ಮೇಲೆ ನೇತಾಡುವ ಒಂದು ಚೀಲದೊಳಗಿನಿಂದ ಸಾವಿರ ಮೊಹರಿಗಳನ್ನು ತೆಗೆದು ಪಿಂಗಳನಿಗೆ ಕೊಡುತ್ತ, "ಈ ಹಣವನ್ನು ನಿನ್ನ ತಾಯಿಗೆ ಕೊಟ್ಟು ಬಾ. ನಿನ್ನ ಕ್ಷೇಮವನ್ನು ಕುರಿತು ಆಕೆ ಹೆದರಬೇಕಾದ ಅಗತ್ಯವೇನಿಲ್ಲ. ನಾಳೆ ಇದೇ ಹೊತ್ತಿಗೆ ಇಲ್ಲಿಗೆ ಬಂದು ನನ್ನನ್ನು ನೋಡು.. ಕಾದಿರುತ್ತೇನೆ" ಎಂದನು.

ಪಿಂಗಳನು ಪದ್ಮಪಾದನು ಕೊಟ್ಟ ಹಣವನ್ನು ತೆಗೆದುಕೊಂಡು ಬಹಳ ಸಂತೋಷದಿಂದ ಮನೆಗೆ ಹೋದನು. ಆಗ ಮನೆಯಲ್ಲಿ ಅವನ ಅಣ್ಣಂದಿರು ಇರಲಿಲ್ಲ. ತಾಯಿಯೊಬ್ಬಳೇ ಅವನ ದಾರಿಯನ್ನು ಇದಿರುನೋಡಿಕೊಂಡಿದ್ದಳು. ಪಿಂಗಳನು ತಾನು ತಂದ ಸಾವಿರ ಮೊಹರಿಗಳನ್ನು ತಾಯಿಯ ಮುಂದೆ ಸುರಿದನು. ಅದನ್ನು ನೋಡಿ ಅವಳು ಗದಗದ ನಡುಗಿದಳು. ಅವಳ ಬಾಯಿಯಿಂದ ಮಾತೇ ಹೊರಡಲಿಲ್ಲ. ಮಗನ ಮುಖವನ್ನೇ ರೆಪ್ಪೆ ಬಡಿಯದೆ ನೋಡುತ್ತಿದ್ದಳು.

"ಏನೂ ಭಯವಿಲ್ಲಮ್ಮಾ. ನ್ಯಾಯವಾದ ಹಣ ಇದು! ಒಂದು ಚೂರು ಅನ್ಯಾಯವೂ ಇದರಲ್ಲಿಲ್ಲ" ಎಂದನು ಪಿಂಗಳ ನಗುತ್ತ.

"ಇಷ್ಟು ಹಣ ಎಲ್ಲಿಂದಲೋ ಕಂದಾ? ನನಗೇನೋ ಸಂಶಯವಾಗಿದೆಯಪ್ಪಾ! ಇದೇನೋ ನಮ್ಮ ಒಳ್ಳೆಯದಕ್ಕೆ ಅಂತ ನನಗೆ ಕಾಣುವುದಿಲ್ಲಪ್ಪಾ, ಮಗಾ" ಎಂದಳು ತಾಯಿ.

ಪಿಂಗಳನು ನಡೆದ ಸಮಾಚಾರವನ್ನೆಲ್ಲಾ ತಾಯಿಗೆ ಹೇಳಿದನು. ಇನ್ನು ಎರಡೇ ತಿಂಗಳೊಳಗೆ ಕ್ಷೇಮವಾಗಿ ಮನೆಗೆ ಹಿಂದಿರುಗಿ ಬರುವೆನೆಂದೂ, ಸ್ವಲ್ಪವೂ ಹೆದರಬೇಕಾಗಿಲ್ಲವೆಂದೂ ತಾಯಿಗೆ ಧೈರ್ಯ ಹುಟ್ಟಿಸಿದನು.

"ಏನೋ ಅಪ್ಪ! ಮಾಂತ್ರಿಕರ ಒಳ್ಳೆಯ ತನದಲ್ಲಿ ನನಗೇನೋ ನಂಬುಗೆ ಬರುವುದಿಲ್ಲ, ಈ ಪದ್ಮ



ಪಾದನು ಎಲ್ಲರ ಹಾಗಿನವನಲ್ಲವೆಂದು ಹೇಳುತ್ತೀ. ನಮ್ಮನ್ನೆಲ್ಲಾ ತಿಳಿದವನಂತಿದ್ದಾನೆ. ನೀನು ಹೋಗದಿದ್ದರೂ ಕೆಡುಕೇ ಬರಬಹುದು. ಅವನಿಗೆ ಕೋಪ ಬಂದರೆ ಕಷ್ಟವೇ. ದೇವರ ದಯದಿಂದ ನಿನಗೇನೂ ಕಷ್ಟಬಾರದಿರಬೇಕು. ಭಲ್ಲೂಕ ಪರ್ವತಗಳಿಂದ ಸುಖವಾಗಿ ಹಿಂದಿರುಗಿ ನೀನು ಬರುವ ಹಾಗೆ ಮಾಡುವಂತೆ ಮುಕ್ಕೋಟಿ ದೇವತೆಗಳನ್ನೂ ಬೇಡಿಕೊಂಡಿರುತ್ತೇನೆ" ಎಂದಳು ತಾಯಿ.

ಮರುದಿನ ಪದ್ಮಪಾದನು ಹೇಳಿದ ಸಮಯಕ್ಕೆ ಪಿಂಗಳನು ಶುಕ ಸರೋವರದ ಕಡೆಗೆ ಹೋದನು. ಸರೋವರದ ತೀರದಲ್ಲಿ ಪದ್ಮಪಾದನೊಬ್ಬನೇ ಸುಮ್ಮನೆ ಕುಳಿತಿದ್ದನು. ಅವನ ಬದಿಯಲ್ಲಿ ಒಂದು ಚೀಲದ ಹೊರತು ಮತ್ತೇನೂ ಇದ್ದಿಲ್ಲ. ಪ್ರಯಾಣಕ್ಕೆ ಬೇಕಾದ ಕುದುರೆಯೋ ಬೇರೆ ಯಾವ ವಾಹನವೋ ಅಲ್ಲೆಲ್ಲೂ ಕಾಣಲಿಲ್ಲ.

ಪಿಂಗಳನು ಅವನ ಬಳಿಗೆ ಹೋಗಿ, "ನಾನೇನೋ ಹೇಳಿದ ಹಾಗೆ ಬಂದುಬಿಟ್ಟೆನು. ನಿಮ್ಮನ್ನು ನೋಡಿದರೆ ನಾವು ಕಾಲು ನಡಿಗೆಯಿಂದಲೇ ಪ್ರಯಾಣಮಾಡಬೇಕೆಂದು ಕಾಣುತ್ತದೆ." ಎಂದನು.

"ಕಾಲು ನಡಿಗೆಯಿಂದಲೋ ? ಅದು ನಡೆಯುವ ಮಾತಲ್ಲ. ಭಲ್ಲೂಕ ಪರ್ವತಗಳ ಹತ್ತಿರ ಹೋಗಬೇಕಾದರೆ ನಾವು ಮುನ್ನೂರು ಮೈಲು ದೂರ ಪ್ರಯಾಣ ಮಾಡಬೇಕು. ಆ ಪ್ರಯಾಣಕ್ಕೆ ಸಾಧಾರಣ ಕುದುರೆಗಳೂ ಪ್ರಯೋಜನವಿಲ್ಲ. ಇನ್ನೆರಡು ದಿನಗಳಲ್ಲಿ ಒಂದು ಪರ್ವದಿನ ಬರುತ್ತದೆ. ಆ ದಿನದಲ್ಲಿ ನಾವು ಭಲ್ಲೂಕಪರ್ವತಗಳ ಹತ್ತಿರ ಇರಲೇಬೇಕು. ಇಕೋ, ನೋಡು ನಮಗೆ ತಕ್ಕ ವಾಹನಗಳನ್ನು!" ಎಂದು ಹೇಳಿ ಪದ್ಮಪಾದನು ಒಂದು ಚಿಟಿಕೆ ಮಣ್ಣು ತೆಗೆದುಕೊಂಡು ಏನೋ ಮಂತ್ರವನ್ನು ಜಪಿಸಿ, ನೆಲದ ಮೇಲೆ ಚೆಲ್ಲಿದನು.

ಮರು ಕ್ಷಣದಲ್ಲಿ ಫಡಫಡ ಶಬ್ದಗಳಿಂದ ಭೂಮಿ ಒಡೆಯಿತು. ಆ ಒಡಕಿನೊಳಗಿನಿಂದ ತಲೆಯನ್ನೆತ್ತಿಕೊಂಡು, ಕರ್ಣ ಕಠೋರವಾಗಿ ಓಂಡ್ರಿಸುತ್ತ, ಎರಡು ಕತ್ತೆಗಳು ಹೊರಗೆ ಹಾರಿ ಕುಣಿದು ನಿಂತವು. ಪದ್ಮ





ಪಾದನು ಅವುಗಳಲ್ಲಿ ಒಂದರ ಮೇಲೆ ತನ್ನ ಹತ್ತಿರವಿದ್ದ ಚೀಲವನ್ನು ನೇತಾಡುವಂತೆ ಕಟ್ಟಿ, ಅದರ ಮೇಲೆ ಏರಿ ಕುಳಿತುಕೊಂಡನು. ಪಿಂಗಳನು ಭಯಕಂಪಿತನಾಗಿ, ಏನು ಮಾಡಬೇಕೆಂದು ತೋರದೆ, ಆ ಎರಡು ಕತ್ತೆಗಳ ಕಡೆಗೆ ರೆಪ್ಪೆ ಬಡಿಯದೆ ನೋಡುತ್ತಕದಲದೆ ನಿಂತಿದ್ದನು.

"ಪಿಂಗಳಾ, ಅದು ನಿನ್ನ ವಾಹನ. ಏರಿ ಕುಳಿತುಕೋ. ನಾವು ಹೋಗಬೇಕಾದ ಪ್ರದೇಶ ಬಹುದೂರವಲ್ಲವೇನು? ಇನ್ನು ಹೊರಡೋಣ. ಸೊಗಸಾದ ವಾಹನಗಳು ಇವೇ. ಏರಿಕೋ" ಎಂದನು ಪದ್ಮಪಾದನು ಉತ್ಸಾಹದಿಂದ ನಗುತ್ತ.

"ಇವು ಮಾಮೂಲು ಕತ್ತೆಗಳಲ್ಲವಯ್ಯಾ. ಪಿಶಾಚಿ ಕತ್ತೆಗಳು. ನಾನು ನಿಮ್ಮ ಹಾಗೆ ಮಂತ್ರವಾದಿಯಲ್ಲವಷ್ಟೆ? ಹತ್ತಿ ಬಿಟ್ಟರೆ ಏನಾಗುತ್ತೋ! ಭಯವಾಗಿದೆ!" ಎಂದನು ಪಿಂಗಳ.

"ಇವು ಮಾಮೂಲು ಕತ್ತೆಗಳಲ್ಲವೆಂಬುದು ನಿಜವೇ. ಪಿಶಾಚಿಗಳಾದ ಮಾತ್ರಕ್ಕೆ ನೀನು ಹೆದರಬೇಕಾಗಿಲ್ಲ. ನಾವು ಹೇಳಿದ ಹಾಗೆ ಇವು ನಡೆಯುತ್ತವೆ. ವಾಯುವೇಗ ಮನೋವೇಗಗಳಿಂದ ಪ್ರಯಾಣ ಮಾಡುತ್ತವೆ. ನಾನಿರುವಾಗ ನೀನೇನೂ ಹೆದರಬೇಕಾಗಿಲ್ಲ." ಎಂದನು ಪದ್ಮಪಾದ.

ಪದ್ಮಪಾದನ ಮಾತು ಕೇಳಿದ ಮೇಲೆ ಪಿಂಗಳನಿಗೆ ಧೈರ್ಯ ಬಂತು. ಆದುದಾಗಲೆಂಬ ಮೊಂಡು ಹಟದಿಂದ ಆ ಕತ್ತೆಯ ಮೇಲೆ ಏರಿ ಕುಳಿತನು. ಮರುಕ್ಷಣದಲ್ಲಿ ಎರಡು ಕತ್ತೆಗಳೂ ಗಟ್ಟಿಯಾಗಿ ಓಂಡ್ರಿಸಿ, ಸ್ವಲ್ಪ ಹೊತ್ತು ನೆಲದಲ್ಲಿ ಓಡುತ್ತಾ; ಹಾಗೆಯೇ ಆಕಾಶಕ್ಕೇರಿ ಸ್ವಲ್ಪ ದೂರ ಸಾಗಿ, ಮತ್ತೆ ನೆಲದಲ್ಲಿ ಮತ್ತೆ ಆಕಾಶದಲ್ಲಿ ಹೀಗೆ ಓಡುತ್ತಲೇ ಇದ್ದುವು. ಅವುಗಳ ವೇಗಕ್ಕೆ ಗಾಳಿ ಸ್ಯೊಂ ಸ್ಯೊಂ ಶಬ್ದದಿಂದ ಸೀಳಿ ಸೀಳಿ ದಾರಿ ಬಿಡುವುದು ಸ್ಪಷ್ಟವಾಗಿ ಗೊತ್ತಾಗುತ್ತಿದ್ದಿತು.

ಕತ್ತಲೆ ಮುಸುಗುವ ಸಮಯಕ್ಕೆ ಒಂದಾನೊಂದು ಕಾಡಿನ ಪ್ರಾಂತವನ್ನು ತಲುಪಿದರು. ಪದ್ಮಪಾದನು ಮೊದಲು ಕತ್ತೆಯಿಂದ ಕೆಳಗಿಳಿದು, "ಪಿಂಗಳಾ, ಈ ರಾತ್ರಿಯಲ್ಲಿ ಇಲ್ಲಿಯೇ ಇದ್ದು ದಣಿವಾರಿಸಿಕೊಳ್ಳೋಣ. ಉಳಿದಿರುವ ದೂರವನ್ನು ನಾಳೆ ಸಾಯಂಕಾಲದೊಳಗೆ ಮುಗಿಸಬಹುದು" ಎಂದನು. ಬಹಳವಾಗಿ ದಣಿದಿದ್ದ ಪಿಂಗಳನಿಗೆ ಅದು ಒಳ್ಳೆಯದೆನಿಸಿತು.

ಅಲ್ಲಿರುವ ಹಚ್ಚಗಿನ ಹುಲ್ಲುಗಾವಲಿನಲ್ಲಿ ಸ್ವಲ್ಪ ಹೊತ್ತು ಕುಳಿತ ಮೇಲೆ, ಪಿಂಗಳನಿಗೆ ತಣ್ಣಗೆ ಸ್ನಾನ ಮಾಡಬೇಕೆಂದು ತೋರಿತು. ಈ ಪ್ರಾಂತದಲ್ಲಿ ಎಲ್ಲಿಯಾದರೂ ಜಲಾಶಯವಿದೆಯೇ ಎಂದು ಪದ್ಮಪಾದನನ್ನು ಕೇಳಿದನು. ಪದ್ಮಪಾದನು ಕಾಡಿನ ಕಡೆಗೆ ಕೈ ತೋರಿಸಿ, "ಆಗೋ, ಆ ಕಾಡಿನೊಳಗೆ ಒಂದು ಕೊಳವಿದೆ. ಹೋಗಿ ಮಿಂದು ಬಂದುಬಿಡು. ಆ ಪ್ರಾಂತದಲ್ಲಿ ಯಾರನ್ನಾದರೂ ನೋಡಿದರೆ ನೀನೇನೂ ಹೆದರಬೇಕಾಗಿಲ್ಲ" ಎಂದನು.



ಪಿಂಗಳನು ಆವನು ತೋರಿಸಿದ ಕಡೆಗೆ ಹೊರಟನು. ಯಾರನ್ನಾದರೂ ನೋಡಿದರೆ ಹೆದರಬೇಕಾಗಿಲ್ಲವೆಂದು ಪದ್ಮಪಾದನು ಏಕೆ ಹೇಳಿದನೆಂದು ಅವನಿಗೆ ಅರ್ಥವಾಗಲಿಲ್ಲ. ಅವನು ಜಾಗರೂಕನಾಗಿ ಮರಗಳ ಬುಡದಲ್ಲಿ ನಡೆಯುತ್ತ, ಮುಂದೆ ಹೋಗಲು ಒಂದು ಕೊಳವಿರುವುದು ಕಂಡಿತು. ನಿರ್ಮಲವಾಗಿದ್ದ ಆ ಕೊಳದ ನೀರು ಅವನಿಗೆ ಬಹಳ ಸಂತೋಷವನ್ನುಂಟು ಮಾಡಿತು. ಅವನು ಉತ್ಸಾಹದಿಂದ ಆ ಕೊಳಕ್ಕೆ ಇಳಿಯಲು ನೋಡಿದನು. ಅಷ್ಟರಲ್ಲಿ ಆ ಪ್ರದೇಶವೆಲ್ಲಾ ನಡುಗುವ ಹಾಗೆ ದೀನಸ್ವರ ಹೊರಟಿತು. "ಯಾರಿದ್ದೀರಯ್ಯೋ! ನನ್ನನ್ನು ಈ ಕಟ್ಟಿನಿಂದ ಬಿಡಿಸಿರಪ್ಪಾ! ನಿಮಗೆ ಸಹಾಯಕನಾಗಿರುತ್ತೇನೆ, ನನ್ನನ್ನು ಕಾಪಾಡಿರಯ್ಯಾ."

ಪಿಂಗಳನು ಆ ಸ್ವರವನ್ನು ಕೇಳಿ ಬೆಚ್ಚಿಬಿದ್ದನು. ಅವನ ದೃಷ್ಟಿ ಆ ಧ್ವನಿ ಬಂದ ಕಡೆಗೆ ಹೋಯಿತು. ಕೊಳದ ತೀರದಲ್ಲೊಂದು ಕಡೆ, ಎರಡು ದೊಡ್ಡ ಬಂಡೆ ಕಲ್ಲುಗಳಿಗೆ ಸಂಕೋಲೆಯಿಂದ ಬಂಧಿಸಲ್ಪಟ್ಟ ಕಠ್ರುಗಿನ ವಿಕೃತಾಕಾರದ ಮನುಷ್ಯನೊಬ್ಬನು ಅವನ ಕಣ್ಣಿಗೆ ಬಿದ್ದನು.

ಪಿಂಗಳನು ಆ ಭಯಂಕರ ಮನುಷ್ಯನನ್ನು ನೋಡಿ ಧೃತಿಗೆಟ್ಟವನಾಗಿ, ಅಲ್ಲಿಂದ ಹಿಂದಿರುಗಿ ಓಡಿಬಿಡಲು ಹವಣಿಸಿದನು. ಅಷ್ಟರಲ್ಲಿ ಆ ವಿಕೃತಾಕಾರನು ಬಲವಾದ ಸಂಕೋಲೆಗಳಿಂದ ಕಲ್ಲುಗಳಿಗೆ ಕಟ್ಟಲ್ಪಟ್ಟಿರುವುದು ನೆನಪಾಗಿ ಧೈರ್ಯದಿಂದ ನೋಡುತ್ತಾ ನಿಂತಲ್ಲೇ ನಿಂತು ಬಿಟ್ಟನು.

"ಓ! ಮಹಾಪ್ರಭೂ! ಮಹಾಸ್ವಾಮಿ! ನನ್ನ ಕೈಗಳಿಗಿರುವ ಸಂಕೋಲೆಯನ್ನು ಮುರಿದು ನನ್ನನ್ನು ಕಾಪಾಡಿಬಿಡಿ. ನಾನು ನಿಮಗೆ ಎಂತಹ ಸಹಾಯ ಬೇಕಾದರೂ ಮಾಡುತ್ತೇನೆ" ಎಂದು ಆ ವಿಕೃತಾಕಾರನು ಪಿಂಗಳನನ್ನು ನೋಡಿ ಪದೇ ಪದೇ ಕೂಗತೊಡಗಿದನು.

ಅಷ್ಟು ಹೊತ್ತಿಗೆ ಪಿಂಗಳನಿಗೆ ಚೆನ್ನಾಗಿ ಧೈರ್ಯ ಬಂದಿತು. ಅವನು ಮೆಲ್ಲ ಮೆಲ್ಲನೆ ಹೆಜ್ಜೆ ಇಡುತ್ತ ಆ ವಿಕೃತಾಕಾರನ ಹತ್ತಿರ ಹೋದನು. ಹತ್ತಿರದಲ್ಲಿ ನೋಡುವಾಗ ವಿಕೃತಾಕಾರನು ಇನ್ನಷ್ಟು ಭಯಂಕರವಾಗಿ ಕಂಡನು. ತಾಳೇ ಮರದ ಅಡಿಭಾಗದಂತೆ ಅವನ ಕಾಲುಗಳಿದ್ದುವು. ಜಡೆಗಳ ಪೊದರಿನಂತೆ ಮೈ ತುಂಬಾ ಕೂದಲ ರಾಶಿಯೂ, ಆನೆಯಂತಹ ಕಿವಿಗಳೂ, ಬೆಂಕಿಯನ್ನುಗುಳುವ ಕಣ್ಣುಗಳೂ ಪಿಂಗಳನನ್ನು ಗಡ ಗಡ ನಡುಗಿಸಿದುವು.

"ಸಂದೇಹಪಡಬೇಡಿ ಸ್ವಾಮಿ! ನನ್ನನ್ನು ಕಾಪಾಡಿರಿ. ನಿಮಗೆ ಎಂತಹ ಸಹಾಯ ಬೇಕಾದರೂ ಮಾಡುತ್ತೇನೆ. ಈ ಮೂರು ಲೋಕಗಳಲ್ಲಿ ಎಲ್ಲಿಗೆ ಬೇಕಾದರೂ ನಿಮ್ಮನ್ನು ಹೊತ್ತುಕೊಂಡು ಹೋಗುತ್ತೇನೆ" ಎಂದನು ವಿಕೃತಾಕಾರದವನು.

ಪಿಂಗಳನು ಆ ಮಾತು ಕೇಳಿ ನಕ್ಕು "ನೀನು ಮೂರು ಲೋಕಗಳಿಗೆ ಮಾತ್ರವೇ ಹೊರುವವನಾದರೆ

ಹದಿನಾಲ್ಕು ಲೋಕಗಳಿಗೂ ನನ್ನನ್ನು ಹೊತ್ತುಕೊಂಡು ಓಡುವ ಕತ್ತೆಯೇ ನನಗಿದೆ, ನಿನ್ನನ್ನು ನೋಡಿದರೆ ಕತ್ತೆಗಿಂತಲೂ ಬಲವಾಗಿರುವವನಾಗಿ ಕಾಣುವಿ. ಬುದ್ಧಿ ಕೂಡಾ ನಿನಗೆ ಕತ್ತೆಗಿಂತ ಹೆಚ್ಚೇ ಇದ್ದೀತು. ಏನು ನಿನ್ನ ಹೆಸರು ?" ಎಂದು ಕೇಳಿದನು.

"ನನ್ನ ಹೆಸರು ಭಲ್ಲೂಕಕೇತು" ಎಂದನು ಆ ವಿಕೃತಾಕಾರಿ.

"ಹಾಗಾದರೆ ಇಲ್ಲಿಗೆ ಸಮೀಪದಲ್ಲಿರುವ ಭಲ್ಲೂಕ ಪರ್ವತಗಳ ಸಮಾಚಾರ ನಿನಗೆ ಗೊತ್ತೇನು ?" ಎಂದು ಪಿಂಗಳನು ಪ್ರಶ್ನಿಸಿದನು.

"ಭಲ್ಲೂಕ ಪರ್ವತಗಳ ಸಮಾಚಾರವೋ ?" ಎಂದು ವಿಕೃತಾಕಾರದವನು ನಕ್ಕು "ನಾನು ಆ ಭಲ್ಲೂಕ ಪರ್ವತಗಳಿಗೆ ಒಂದು ಸಾರಿ ಅಧಿಪತಿಯಾಗಿದ್ದವನು. ಒಬ್ಬ ಮಾಂತ್ರಿಕನಿಂದಾಗಿ ನನಗೆ ಈ ದುರ್ದೆಶೆ ಬಂದಿದೆ. ನೀವು ನನ್ನನ್ನು ಈ ಬಂಧನದಿಂದ ಬಿಡಿಸಿ ಬಿಟ್ಟರೆ, ಆ ಪರ್ವತಗಳಲ್ಲಿರುವ ಸರ್ವ ಸಂಪತ್ತುಗಳನ್ನೂ ನಿಮ್ಮದಾಗಿ ಮಾಡಿಬಿಡುತ್ತೇನೆ" ಎಂದನು ವಿಕೃತಾಕಾರಿ.

ಭಲ್ಲೂಕ ಕೇತು ಹಾಗೆ ಹೇಳಿದುದನ್ನು ಕೇಳಿ, ಪಿಂಗಳನಿಗೆ ಎಲ್ಲಿಲ್ಲದಷ್ಟು ಆಸೆ ಗುಂಪುಗುಂಪಾಗಿ ಎದ್ದುಕೊಂಡಿತು. "ಈ ಭಲ್ಲೂಕ ಕೇತುವಿನ ಸಹಾಯದಿಂದ ಭಲ್ಲೂಕ ಪರ್ವತಗಳಲ್ಲಿರುವ ನಿಧಿ ನಿಕ್ಷೇಪಗಳಷ್ಟನ್ನೂ ವಶಪಡಿಸಿಕೊಳ್ಳಬಹುದು. ಬೇಕಾದರೆ ಅದರಲ್ಲಿ ಪದ್ಮಪಾದನಿಗೂ ಭಾಗ ಕೊಟ್ಟರಾಯಿತು. ಅವನು ನನಗೆ ಕೊಡುವುದನ್ನು ಮಹಾಪ್ರಸಾದವೆಂದು ಸ್ವೀಕರಿಸುವ ಹಂಗೇನಿಲ್ಲವಷ್ಟೆ?" ಎಂದುಕೊಂಡನು.

"ಹಾಗಾದರೆ ನಿನ್ನನ್ನು ಈ ಸಂಕೋಲೆ ಬಂಧನದಿಂದ ಬಿಡುಗಡೆ ಮಾಡುತ್ತೇನೆ. ಆಮೇಲೆ ನೀನು ನನಗೆ ಕೆಡುಕು ಮಾಡುವುದಿಲ್ಲ ಎಂಬುದಕ್ಕೆ ನಂಬುಗೆ ಏನಿದೆ ?" ಎಂದು ಕೇಳಿದನು ಪಿಂಗಳ.

ಭಲ್ಲೂಕಕೇತು ಆಸೆಯಿಂದ ಪಿಂಗಳನನ್ನು ನೋಡುತ್ತ, "ಸ್ವಾಮೀ, ಹೇಳಿದ ಮಾತು ತಪ್ಪಿದರೆ ತಲೆ ಒಡೆದು ಸಾಯುವೆನೆಂದು ನನಗೆ ಶಾಪವಿದೆ. ನಿಮಗೆ ಹಾನಿ ಮಾಡಲಾರೆನೆಂದು ಮಾತುಕೊಟ್ಟ ಮೇಲೆ, ನಾನು ಸಾಯಲಿಕ್ಕೆ ಸಿದ್ಧನಾದರೇನೇ ಮಾತು ತಪ್ಪಿಯೇನು. ನಂಬಿರಿ ಸ್ವಾಮೀ" ಎಂದನು.

ಪಿಂಗಳನಿಗೆ ಭಲ್ಲೂಕಕೇತುವಿನ ಮಾತಿನ ಮೇಲೆ ನಂಬುಗೆಯುಂಟಾಯಿತು. ಅವನು ಕೊಳದ ಬದಿಯಲ್ಲಿದ್ದ ಒಂದು ಕಲ್ಲನ್ನು ಎತ್ತಿಕೊಂಡು, ಸಂಕೋಲೆಯನ್ನು ಗುದ್ದಿ ಮುರಿಯಲು ಮುಂದಡಿ ಇಟ್ಟನು. ಆಗ ಹಿಂದಿನಿಂದ ಪದ್ಮಪಾದನು ಗಟ್ಟಿಯಾಗಿ "ಪಿಂಗಳಾ ! ನಿಲ್ಲು ನಿಲ್ಲು ! ದುಡುಕಬೇಡ !" ಎಂದು ಕೂಗಿದನು.

—(ಇನ್ನೂ ಇದೆ)

